ಕರ್ನಾಟಕ ಸರ್ಕಾರ

# ಪಂಚಾಯತಿ ರಾಜ್ಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ತರಬೇತಿ ಮತ್ತು ಸಂಪರ್ಕ ನೆರವು

# TRAINING & COMMUNICATION SUPPORT TO WOMEN IN PANCHAYAT RAJ INSTITUTIONS



ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

DEPARTMENT OF WOMEN & CHILD DEVELOPMENT

AUGUST 94

# ಪಂಚಾಯತಿ ರಾಜ್ಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ
# ತರಬೇತಿ ಮತ್ತು ಸಂಪರ್ಕ ನೆರವು

# TRAINING & COMMUNICATION SUPPORT TO WOMEN IN PANCHAYAT RAJ INSTITUTIONS





# ಮುನ್ನುಡಿ

ರಾಷ್ಟ್ರದ ಜನಸಂಖ್ಯೆಯ ಸುಮಾರು ಅರ್ಧದಷ್ಟು ಮಹಿಳೆಯರು ಇದ್ದಾರೆ. ಸಂವಿಧಾನ ಮತ್ತು ದೇಶದ ಕಾನೂನಿನಡಿಯಲ್ಲಿ ಅವರು ತಮ್ಮ ಜೀವನವನ್ನು ರೂಪಿಸಲು ಹಾಗೂ ಸಾರ್ವಜನಿಕ ನೀತಿಯನ್ನು ಪ್ರಭಾವಿಸಲು ಇತರ ಪುರುಷ ಪ್ರಜೆಗಳಷ್ಟೇ ಸ್ವಾತಂತ್ರ್ಯ ಹೊಂದಿದ್ದಾರೆ. ಆದರೆ ಸಾರ್ವತ್ರಿಕ ನೀತಿ ರೂಪಿಸುವಲ್ಲಿ ಮತ್ತು ಸಾರ್ವಜನಿಕ ಆಡಳಿತದಲ್ಲಿ ಮಹಿಳೆಯರ ವಾಸ್ತವ ಪಾತ್ರ ಮಿತಿಯಾಗಿದೆ.

ಸಂವಿಧಾನದ 73ನೇ ತಿದ್ದುಪಡಿ ಮತ್ತು ಕರ್ನಾಟಕ ಪಂಚಾಯತ್ ರಾಜ್ಯ ಕಾಯಿದೆಯಡಿಯಲ್ಲಿ ಸುಮಾರು 35000 ಮಹಿಳೆಯರು ಮೂರು ಹಂತದ ಜಿಲ್ಲಾ ಆಡಳಿತ ವ್ಯವಸ್ಥೆಯಲ್ಲಿ ಭಾಗವಹಿಸಲು ಅನುವು ಮಾಡಿಕೊಡುತ್ತದೆ. ಈ ಚುನಾಯಿತ ಪ್ರತಿನಿಧಿಗಳು ದಕ್ಷತೆಯಿಂದ ಕಾರ್ಯ ನಿರ್ವಹಿಸಲು ಸೂಕ್ತ ವಾತಾವರಣ ಸೃಷ್ಟಿಸಿ ಮಹಿಳೆಯರು ಭಾಗವಹಿಸುವ ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕು.

ಪಂಚಾಯತಿ ರಾಜ್ಯ ಸದಸ್ಯರಿಗೆ ತರಬೇತಿ ನೀಡುವ ಈ ಹೊಸ ಕಾರ್ಯಕ್ರಮವು ವಿಕೇಂದ್ರೀಕರಣದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅವರು ಪರಿಣಾಮಕಾರಿಯಾಗಿ ಭಾಗವಹಿಸುವಲ್ಲಿ ಪ್ರಥಮ ಹೆಜ್ಜೆಯಾಗಿದೆ.

ಎಂ. ವೀರಪ್ಪ ಮೊಯಿಲಿ

( ಎಂ. ವೀರಪ್ಪ ಮೊಯಿಲಿ )
ಮುಖ್ಯಮಂತ್ರಿ

ಆಗಸ್ಟ್ 1994

# ಕರ್ನಾಟಕ ಸರ್ಕಾರ ಹೊರಡಿಸಿದ ನಡವಳಿಕೆಗಳು

ವಿಷಯ : ಪಂಚಾಯತಿ ರಾಜ್ಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ತರಬೇತಿ ಮತ್ತು ಸಂಪರ್ಕ ನೆರವು

ಉಲ್ಲೇಖ : ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಅ.ಸ. ಪತ್ರಸಂಖ್ಯೆ ಡಿಡಬ್ಲ್ಯೂ ಸಿಡಿ ಪಿಆರ್ ಐ2 ಟಿಆರ್‌ಜಿ 93-94 ದಿನಾಂಕ 18-3-94

## ಪ್ರಸ್ತಾವನೆ

ಕರ್ನಾಟಕ ಪಂಚಾಯತಿ ರಾಜ್ಯ 1993ರ ಅದಿನಿಯಮವು ಗ್ರಾಮ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿಗಳಲ್ಲಿ ಮಹಿಳೆಯರಿಗಾಗಿ ಕನಿಷ್ಟ 13ರಷ್ಟು ಮೀಸಲಾತಿಗೆ ಅವಕಾಶ ಮಾಡಿದೆ. 5641 ಗ್ರಾಮ ಪಂಚಾಯತಿಗಳಲ್ಲಿನ ಒಟ್ಟು 80,631 ಸ್ಥಾನಗಳಲ್ಲಿ 35334 ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಾಗಿರಿಸಲಾಗಿದೆ. ಈ ಮೀಸಲಾತಿ ಗ್ರಾಮ ಪಂಚಾಯತಿಗಳಲ್ಲಿನ ಒಟ್ಟು ಸ್ಥಾನಗಳ ಶೇಕಡಾ 43.6ರಷ್ಟಾಗಿರುತ್ತದೆ. ತಾಲ್ಲೂಕು ಮಟ್ಟದಲ್ಲಿ ಒಟ್ಟು 3340 ವ್ಯಕ್ತಿಗಳ ಪೈಕಿ 1396 ಮಹಿಳೆಯರೂ ಮತ್ತು ಜಿಲ್ಲಾ ಮಟ್ಟದಲ್ಲಿ ಒಟ್ಟು 909 ವ್ಯಕ್ತಿಗಳ ಪೈಕಿ 329 ಮಹಿಳೆಯರು ಈ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುವ ಅವಕಾಶ ಪಡೆದಿರುತ್ತಾರೆ.

ಹಾಗಿದ್ದರೂ ಮಹಿಳೆಯರ ಶೈಕ್ಷಣಿಕ ಸಾಮಾನ್ಯ ಅರ್ಹತೆ ಅಲ್ಲದೇ ರಾಜಕೀಯ ಅನುಭವದ ಕೊರತೆಯ ಕಾರಣ ಪಂಚಾಯತಿ ರಾಜ್ಯ ಸಂಸ್ಥೆಗಳಲ್ಲಿ ಅವರು ಸಮರ್ಥವಾಗಿ ಪಾಲುಗೊಳ್ಳಲು ಅನುಕೂಲವಾಗುವಂತಹ ಕ್ರಮವಾದ ತರಬೇತಿ ಮತ್ತು ಸಂಪರ್ಕ ನೆರವಿನ ಅವಶ್ಯಕತೆ ಇದೆ.

ಪಂಚಾಯತಿ ರಾಜ್ಯ ಸದಸ್ಯರಿಗೆ ತರಬೇತಿ ಮತ್ತು ಸಂಪರ್ಕ ನೆರವಿನ ಹೊಸ ಕಾರ್ಯ ಯೋಜನೆಯ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. ಅವುಗಳೆಂದರೆ (1) ತರಬೇತಿಯ ತತ್ವಗಳು (2) ತರಬೇತಿ ವಿಷಯ ಸೂಚಿ: ಸೂಚಿತ ವಿಷಯಾನುಕ್ರಮದೊಡನೆ (3) ತರಬೇತಿ ಕಾರ್ಯೋಪಾಯ (4) ಯೋಜನಾ ಪ್ರಸ್ತಾವನೆ ಇತ್ಯಾದಿ.

ಪಂಚಾಯತಿ ರಾಜ್ಯ ಸದಸ್ಯರಿಗಾಗಿ ತಯಾರಿಸಿರುವ ಯೋಜನಾ ಪ್ರಸ್ತಾವನೆಯನ್ನು ರಾಜ್ಯ ಮಟ್ಟದಲ್ಲಿ ಮಹಿಳಾ ಮತ್ತು ಮಕ್ಕಳ ಅಬಿವೃದ್ಧಿ ಇಲಾಖಾ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿತವಾಗಿರುವ ಸಮಿತಿಯ ಮುಂದಿಟ್ಟು ಪರಿಶೀಲಿಸಿ ಅನುಮೋದನೆ ಪಡೆಯಲಾಗುವುದು. ಸರ್ಕಾರದ ಇತರೆ ಅಧಿಕಾರಿಗಳು ಮಹಿಳಾ ಅಭಿವೃದ್ಧಿ ಮತ್ತು ತರಬೇತಿ ಕ್ಷೇತ್ರಗಳಲ್ಲಿ ಕಾರ್ಯನಿರತರಾದ ಸ್ವಯಂಸೇವಾ ಸಂಘಗಳ ಪ್ರತಿನಿಧಿಗಳು ಈ ಸಮಿತಿಯ ಇತರ ಸದಸ್ಯರಾಗಿರುತ್ತಾರೆ.

ಈ ಕಾರ್ಯ ಯೋಜನೆಗೆ 1994-95ನೇ ಸಾಲಿನ ಆಯವ್ಯಯದಲ್ಲಿ ರೂ. 50-00 ಲಕ್ಷಗಳ ಅವಕಾಶ ಮಾಡಲಾಗಿದೆ. ಈ ಉದ್ದೇಶಕ್ಕಾಗಿ 2235-02-103-0-20 ಒಂದು ಹೊಸ ಲೆಕ್ಕ ಶೀರ್ಷಿಕೆಯನ್ನು ಸೃಷ್ಟಿಸಲಾಗಿದೆ.



F-2

**ಸರ್ಕಾರಿ ಆದೇಶದ ಸಂಖ್ಯೆ ಡಬ್ಲ್ಯೂಸಿಡಿ 57 ಎಸ್ ಡಬ್ಲ್ಯೂ ಡಬ್ಲ್ಯೂ 94: ಬೆಂಗಳೂರು ದಿನಾಂಕ 12-7-1994.**

ಪ್ರಸ್ತಾವನೆಯಲ್ಲಿ ಹೇಳಿರುವ ಪರಿಸ್ಥಿತಿಯಲ್ಲಿ ಅನುಬಂಧದಲ್ಲಿ ಲಗತ್ತಿಸಿರುವ ಪಂಚಾಯತಿ ರಾಜ್ಯ ಮಹಿಳಾ ಸದಸ್ಯರಿಗೆ ತರಬೇತಿ ಮತ್ತು ಸಂಪರ್ಕ ನೆರವು ನೀಡುವ ಕಾರ್ಯಯೋಜನೆಯನ್ನು ಅನುಮೋದಿಸಲು ಸರ್ಕಾರವು ಹರ್ಷಿಸುತ್ತದೆ.

ಪಂಚಾಯತಿ ರಾಜ್ಯ ಸದಸ್ಯರಿಗೆ ತರಬೇತಿ ಮತ್ತು ಸಂಪರ್ಕ ನೆರವಿನ ಯೋಜನೆಗಾಗಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ರಾಜ್ಯ ಮಟ್ಟದ ಸಮಿತಿಯನ್ನು ರಚಿಸಲಾಗಿದೆ.

1. ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ — ಅಧ್ಯಕ್ಷರು.
2. ಕಾರ್ಯದರ್ಶಿ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ಯ ಇಲಾಖೆ — ಸದಸ್ಯರು.
3. ಕಾರ್ಯದರ್ಶಿ-2, ಆರ್ಥಿಕ ಇಲಾಖೆ — ಸದಸ್ಯರು
4. ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ — ಸದಸ್ಯರು.
5. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ — ಸದಸ್ಯರು.
6. ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು — ಸದಸ್ಯರು
7. ಮಹಿಳಾ ಅಭಿವೃದ್ಧಿ ಮತ್ತು ತರಬೇತಿಯಲ್ಲಿ ಅನುಭವವುಳ್ಳ 5 ಸ್ವಯಂಸೇವಾ ಸಂಸ್ಥೆಗಳ ಪ್ರತಿನಿಧಿಗಳು (ಸರ್ಕಾರ ಪ್ರತ್ಯೇಕವಾಗಿ ನಾಮಕರಣ ಮಾಡುವುದು) — ಸದಸ್ಯರು.
8. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ — ಸದಸ್ಯ ಕಾರ್ಯದರ್ಶಿ

ಈ ಕಾರ್ಯಯೋಜನೆಯನ್ನು ಕಾರ್ಯಾಚರಣೆಗೊಳಿಸಲು ಪ್ರಥಮ ಹಂತದಲ್ಲಿ ರೂ. 25-00 ಲಕ್ಷ ಹಣ ಮಂಜೂರು ಮಾಡಲಾಗಿದೆ.

ಈ ಹಣವನ್ನು 1994-95ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2235-02-103-0-20ರಲ್ಲಿ ಭರಿಸಲಾಗುವುದು.

ಈ ಆದೇಶವನ್ನು ಇವರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

1. ಆಂತರಿಕ ಆರ್ಥಿಕ ಸಲಹೆಗಾರರು (ಒಎಸ)ಯು ಓ ಟಿಪ್ಪಣಿ; ಸಂಖ್ಯೆ ಡಬ್ಲ್ಯೂ ಎಲ್ 118 ಐ ಎಫ್ ಐ(1)94 ದಿನಾಂಕ 8-4-94 ಮೂಲಕ.

2. ಯೋಜನಾ ಇಲಾಖೆಯ ಯು ಓ ಟಿಪ್ಪಣಿ ಸಂಖ್ಯೆ ಪಿಡಿ 52 ಪಿಟಿಪಿ 94 ದಿನಾಂಕ : 26-4-94 ಮೂಲಕ.

3. ಆರ್ಥಿಕ ಇಲಾಖೆಯು ಯು ಓ ಟಿಪ್ಪಣಿ ಸಂಖ್ಯೆ ಎಫ್ ಡಿ 767 ವೆಚ್ಚ III 94 ದಿನಾಂಕ 18-5-94ರ ಮೂಲಕ.

ಕರ್ನಾಟಕ ರಾಜ್ಯಪಾಲರ ಆದೇಶ ಮತ್ತು ಹೆಸರಿನಲ್ಲಿ

(ಬಿ.ಆರ್. ದಂಡೇನವರ್)
*ಸರ್ಕಾರದ ಅಧೀನ ಕಾರ್ಯದರ್ಶಿ*
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

# ಅನುಬಂಧ-I

## ಪಂಚಾಯತಿ ರಾಜ್ಯ ಸಂಸ್ಥೆಗಳಲ್ಲಿನ ಮಹಿಳೆಯರಿಗೆ ತರಬೇತಿ ಮತ್ತು ಸಂಪರ್ಕ ನೆರವು ತರಬೇತಿಯ ತತ್ವಗಳು.

ತರಬೇತಿಯು ತರಬೇತಿ ಪಡೆಯವವರು ಬಾಗವಹಿಸುವ ಒಂದು ಕಾರ್ಯವಿಧಾನ. ಇದರಲ್ಲಿ ತರಬೇತಿದಾರರಿಗೆ ತಮ್ಮ ಅಭಿಪ್ರಾಯ ಬಿಂಬಿಸಲು ಸಾಕಷ್ಟು ಕಾಲ ಮತ್ತು ಅವಕಾಶವಿರುತ್ತದೆ. ಇದರಿಂದಾಗಿ ತರಬೇತಿ ಕಾರ್ಯಕ್ರಮದ ರಚನೆ ಮತ್ತು ವಿಷಯಾನುಕ್ರಮದ ಮೇಲೆ ಹೆಚ್ಚಿನ ಪ್ರಭಾವ ಬೀರಿದಂತಾಗುತ್ತದೆ.

ತರಬೇತಿಯು ಪ್ರಾಯೋಗಿಕವಾದುದು. ತರಬೇತಿ ಪಡೆಯುವವರು ತಮ್ಮ ಸ್ವಂತ ಅನುಭವ ಮತ್ತು ಇತರ ಅನುಭವದಿಂದ ಕಲಿಯಲು ನೆರವಾಗುತ್ತದೆ. ಇದರಿಂದಾಗಿ ಒಂದು ವಿನೂತನ ವಾತಾವರಣ ಉಂಟಾಗಿ ಅದರಲ್ಲಿ ಮಹಿಳೆಯರು ಹೊಸ ಮೌಲ್ಯಗಳ ನಡವಳಿಕೆಯ ಮಾದರಿ, ಹೊಸ ದೃಶ್ಯ, ಕಾರ್ಯವಿಧಾನವನ್ನು ಗ್ರಹಿಸಿದಂತಾಗುತ್ತದೆ. ಅವರು ತಮ್ಮ ಬಗ್ಗೆ, ಮನೆಯ ಬಗ್ಗೆ, ಸಮುದಾಯದ ಬಗ್ಗಿ ಗುಣಾತ್ಮಕ ತೀರ್ಮಾನ ತೆಗೆದುಕೊಳ್ಳಲು ಪ್ರಾರಂಭಿಸುತ್ತಾರೆ.

ಪಂಚಾಯತಿ ರಾಜ್ಯದ ಸದಸ್ಯರಾಗಿ ಸಮರ್ಥವಾಗಿ ತಮ್ಮ ಜವಾಬ್ದಾರಿಗಳನ್ನು ನಿರ್ವಹಿಸುವಂತೆ ಅವರಿಗೆ ಅವಶ್ಯ ಮಾಹಿತಿಗಳನ್ನು ಈ ತರಬೇತಿಯು ಒದಗಿಸಬೇಕು.

ಈ ತರಬೇತಿಯು 3-4 ತಿಂಗಳಿಗೊಮ್ಮೆ ಹಲವು ಹಂತಗಳಲ್ಲಿ ಸತತವಾಗಿ ನಡೆಯುತ್ತಿರುತ್ತವೆ. ಇದು ಕಾಲಮಿತಿ ಇಲ್ಲದೇ ಮುಂದು ವರಿಯುವ ಒಂದು ಕಾರ್ಯವಿಧಾನ.

1. ತಾಲ್ಲೂಕು ಮತ್ತು ಉಪ ತಾಲ್ಲೂಕು ಮಟ್ಟದಲ್ಲಿ ತರಬೇತಿಯನ್ನು ವಿಕೇಂದ್ರಿಕರಣ ರೀತಿಯಲ್ಲಿ ನಡೆಸಲಾಗುವುದು.

2. ತರಬೇತಿಯನ್ನು ವಸತಿ ಯೋಗ್ಯ ವಾತಾವರಣದಲ್ಲಿ ಆದರ್ಶಾತ್ಮಕವಾಗಿ 5 ದಿನಗಳವರೆಗೆ ನಡೆಸಲಾಗುವುದು. ಮೊದಲ 3 ದಿನಗಳ ತರಬೇತಿ ಮಹಿಳೆಯರಿಗಾಗಿಯೇ ನಡೆಯುವುದು. ಕೊನೆಯ ಎರಡು ದಿನಗಳಲ್ಲಿ ಸ್ತ್ರೀಪುರುಷರಿಬ್ಬರಿಗೂ ಜಂಟಿಯಾಗಿ ತರಬೇತಿ ನೀಡಲಾಗುವುದು.

3. ತರಬೇತಿಯನ್ನು ಸಂಪನ್ಮೂಲ ವ್ಯಕ್ತಿಗಳಿಂದ ನಡೆಸಲಾಗುವುದು. ಇದೇ ತರಬೇತಿದಾರರ ತಂಡವು ತಮ್ಮ ಗುಂಪಿನ ಅಭ್ಯರ್ಥಿಗಳಿಗೆ ವಿವಿಧ ಹಂತಗಳಲ್ಲಿ ಸತತವಾಗಿ ತರಬೇತಿ ನೀಡುತ್ತಾರೆ.

**ತರಬೇತಿ ವಿಷಯ ಸೂಚಿ**

ಈ ಕೆಳಕಂಡ ವಿಷಯಾನುಕ್ರಮವುಳ್ಳ ಒಂದು ಪ್ರತ್ಯೇಕ ತರಬೇತಿ ಕೈಪಿಡಿಯನ್ನು ಸಿದ್ಧಗೊಳಿಸಲಾಗುವುದು.

ಅ. ಪಾಲ್ಗೊಳ್ಳಲು ಯೋಗ್ಯವಾದ ತರಬೇತಿ ವಿಧಾನ.

ಆ. ಸೂಚನಾ ಪ್ರಧಾನವಾದ ಮಾದರಿ.

ಇ. ಸ್ಥಳೀಯವಾಗಿ ತಯಾರಿಸಿದ ಸಮರ್ಥನಾ ವಿಷಯಾನುಕ್ರಮ.

ಈ. ತರಬೇತಿಯ ಪರಿಣಾಮವನ್ನು ನಿರ್ಧರಿಸುವ ತಡೆಪಟ್ಟಿ (ಚೆಕ್ ಲಿಸ್ಟ್). ಈ ತರಬೇತಿಗೆ ಮಹತ್ತರವಾದ ಸ್ಥೂಲ ವಿಷಯ ಸೂಚಿಯನ್ನು ಈ ಕೆಳಗೆ ನೀಡಲಾಗಿದೆ.

1. ಕಲಿಯುವ ವಾತಾವರಣ ನಿರ್ಮಾಣ ಮಾಡುವುದು. ತರಬೇತಿ ಪಡೆಯುವವರ ಆತಂಕ, ಭಾಗವಹಿಸಿ ಕಲಿಯುವುದರ ಬಗ್ಗೆ ಅವರ ಪ್ರತಿರೋದವನ್ನು ಅರ್ಥಮಾಡಿಕೊಳ್ಳುವುದು.

2. ಸ್ವಂತ ವ್ಯಕ್ತಿತ್ವ ಸ್ವಾಭಿಮಾನ ಸ್ಪಷ್ಟ ಉಚ್ಚಾರಣೆ ಕೇಳುವುದು ಮತ್ತು ತಿಳಿಸುವುದು. ಪ್ರತಿಕ್ರಿಯೆಗಳನ್ನು ಒಳಗೊಂಡ ವೈಯಕ್ತಿಕ ಕುಶಲತೆಯನ್ನು ಬೆಳೆಸಿಕೊಳ್ಳುವುದು ಹಾಗೂ ಅವರ ಸಾರ್ವಜನಿಕ ಪಾತ್ರದ ಬಗ್ಗೆ ಸ್ತ್ರೀ ಪುರುಷರ ನಿಷೇದಾರ್ಥಕ ಪ್ರತಿಕ್ರಿಯೆಗಳನ್ನು ಅರಿತು ಅವುಗಳನ್ನು ನಿಭಾಯಿಸುವುದು.

3. ಸಭೆಗಳಲ್ಲಿ ಭಾಗವಹಿಸುವ ಚತುರತೆಯನ್ನು ಅಂತರ್ಗತ ಮಾಡಿಕೊಳ್ಳುವುದು. ಸಭೆ ನಡೆಸುವುದು ಕಲಾಪಗಳ ಸಂಕ್ಷಿಪ್ತ ವರದಿ ತಯಾರಿಸುವುದು.

4. ಪ್ರಜಾಪ್ರಭುತ್ವದಲ್ಲಿ ಪಂಚಾಯತಿ ರಾಜ್ಯ ಸಂಸ್ಥೆಗಳಲ್ಲಿ ರಾಜಕೀಯ ಅವಶ್ಯಕತೆಯನ್ನು ಅರ್ಥಮಾಡಿಕೊಳ್ಳುವುದು ಹಾಗೂ ಮಹಿಳೆಯರು ರಾಜಕೀಯವಾಗಿ ಭಾಗವಹಿಸುವ ಮಹತ್ವ ಮತ್ತು ಅವರಿಗಾಗಿ ಮೀಸಲಾತಿ ಇಡುವ ವಿವೇಚನೆ.

5. ಕರ್ನಾಟಕ ಪಂಚಾಯತಿ ರಾಜ್ಯ ಅಧಿನಿಯಮ 1993ರ ತಪಸಿಲು (ಷೆಡ್ಯೂಲ್)ನ 1,2 ಮತ್ತು 3ರಲ್ಲಿ ಪಟ್ಟಿ ಮಾಡಿರುವ ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿಗಳ ನಿಯಮ-ನಿಯಂತ್ರಣ, ಕಾರ್ಯವಿಧಾನ ಮತ್ತು ಅಧಿಕಾರಗಳನ್ನು ಅರಿತುಕೊಳ್ಳುವುದು.

6. ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಒಂದು ಸಂಪೂರ್ಣ ಯಥಾದೃಷ್ಟಿಯನ್ನು ಪಡೆಯುವುದು.

ಅ. ಶಿಕ್ಷಣ-ಹೆಣ್ಣು ಮಗುವನ್ನು ಕೇಂದ್ರ ಬಿಂದುವಾಗಿ ಇಟ್ಟುಕೊಳ್ಳುವುದು.

ಆ. ಶಿಶು-ತಾಯಿ ಆರೋಗ್ಯ ಮತ್ತು ಪೌಷ್ಟಿಕತೆ

ಇ. ಜೀವಿ ಪರಿಸ್ಥಿತಿ ಮತ್ತು ಪರ್ಯಾವರಣ

ಈ. ಸಮವೇತನ-ಕನಿಷ್ಟ ವೇತನ ವರದಕ್ಷಿಣೆ ಆಸ್ತಿ ಹಕ್ಕುಗಳು ಸಾಮಾಜಿಕ ನ್ಯಾಯ ಮುಂತಾದವುಗಳಿಗೆ ಸಂಬಂಧಿಸಿದ ಮಹಿಳೆಯರಿಗಾಗಿ ಇರುವ ಕಾನೂನುಗಳು.

ಉ. ಮಹಿಳೆಯ ಸ್ಥಾನಮಾನ, ಭೂಮಿ ಸಾಲದ ಮೇಲಿನ ಆರ್ಥಿಕ ಹಕ್ಕುಗಳು, ಕಾನೂನು ಬದ್ಧ ಹಕ್ಕುಗಳು ಸಾಮಾಜಿಕ, ಸಾಂಸ್ಕೃತಿಕ ಮಹತ್ವವುಳ್ಳ ಸಮಸ್ಯೆಗಳತ್ತ ಕೇಂದ್ರಿಕರಿಸುವುದು.

ಊ. ಗ್ರಾಮ ಪಂಚಾಯತಿಯ ನಿರ್ದಿಷ್ಟ ಕಾರ್ಯಕ್ರಮಗಳನ್ನು ಅರ್ಥ ಮಾಡಿಕೊಳ್ಳುವ ಮೂಲಕ ಮತ್ತು ಕಾರ್ಯಕ್ರಮಗಳನ್ನು ರೂಪಿಸುವ ಮೂಲಕ ಗ್ರಾಮ ಪಂಚಾಯತಿಯ ಗೌರವವನ್ನು ಹೆಚ್ಚಿಸುವುದು.

ಅನುಬಂಧ-III : ಕ್ರಮ ಬದ್ಧವಾದ ತರಬೇತಿಗೆ ವ್ಯಾಸಾಂಗ ಕ್ರಮವನ್ನು ನೀಡುತ್ತದೆ. ಇದು ತಾತ್ಕಾಲಿಕವಾದದ್ದು. ಅನುಭವ ಪಡೆದಂತೆಲ್ಲಾ ಇದನ್ನು ಮಾರ್ಪಡಿಸಬಹುದು.

## ಜಿಲ್ಲಾ ತರಬೇತಿ ಕಾರ್ಯೋಪಾಯ:

ಗ್ರಾಮ ಪಂಚಾಯತಿಗಳಲ್ಲಿ ಮಹಿಳಾ ಸದಸ್ಯರ ಸಂಖ್ಯೆ 700 ರಿಂದ 2000 ರಷ್ಟಿರುತ್ತದೆ. ಅಂದರೆ ಸರಾಸರಿ ಸುಮಾರು 1500 ಗ್ರಾಮಪಂಚಾಯತಿ ಮಹಿಳಾ ಸದಸ್ಯರಿಗೆ ಪ್ರತಿ ಜಿಲ್ಲೆಯಲ್ಲಿ ತರಬೇತಿ ನೀಡುವ ಅವಶ್ಯಕತೆ ಇದೆ. ಅನುಬಂಧ-II ಜಿಲ್ಲಾವಾರು ಗ್ರಾಮ ಪಂಚಾಯತಿಗಳಲ್ಲಿ ಮಹಿಳೆಯರಿಗೆ ಹಂಚಿರುವ ಮೀಸಲಾತಿ ಸ್ಥಾನಗಳನ್ನು ತಿಳಿಸುತ್ತದೆ.

## ಸಂಸ್ಥೆಗಳನ್ನು ಗುರುತಿಸುವುದು.

ಜಿಲ್ಲಾ ಪರಿಷತ್ ಜಿಲ್ಲೆಯಲ್ಲಿನ ನಾಲ್ಕೈದು ಸಂಸ್ಥೆಗಳನ್ನು ಗುರುತಿಸಬಹುದು. ಅವುಗಳಿಗೆ ಕ್ರಮವಾಗಿ ತರಬೇತಿ ನೀಡುವ ಕಾರ್ಯಭಾರವನ್ನು ವಹಿಸಬಹುದು. ಹಾಗೆ ಗುರುತಿಸಲ್ಪಟ್ಟ ಪ್ರತಿ ಸಂಸ್ಥೆಯು ಆದರ್ಶಪ್ರಾಯವಾದ ಕನಿಷ್ಟ 3-4 ತರಬೇತುದಾರರನ್ನು ಹೊಂದಿರಬೇಕು. ಅವರಲ್ಲಿ ಹೆಚ್ಚು ಮಹಿಳೆಯರಾಗಿದ್ದು ಪೂರ್ಣಾವಧಿಗೆ ತರಬೇತಿ ಕಾರ್ಯಕ್ರಮದಲ್ಲಿ ಕೆಲಸ ಮಾಡಲು ಒಪ್ಪಿಗೆ ಇರಬೇಕು. ಗುರುತಿಸಬೇಕಾದ ಸಂಸ್ಥೆಗಳು:-

ಅ. ಕರ್ನಾಟಕ ಸಹಕಾರ ಸಂಘಗಳ ನೋಂದಣಿ ಕಾಯಿದೆಯಡಿಯಲ್ಲಿ ನೋಂದಾಯಿತವಾಗಿರಬೇಕು.

ಆ. ಕನಿಷ್ಟ ಎರಡು ವರ್ಷಗಳಷ್ಟು ಮಹಿಳಾ ಅಭಿವೃದ್ಧಿ ಕ್ಷೇತ್ರದಲ್ಲಿ ಮಹಿಳಾ ಶಿಕ್ಷಣದಲ್ಲಿ ಅನುಭವವಿರಬೇಕು.

ಇ. ತರಬೇತಿ ಪ್ರಾರಂಭಿಸಲು ಸೌಲಭ್ಯಗಳು, ಸಂಪನ್ಮೂಲ, ಸಿಬ್ಬಂದಿ ವರ್ಗ ಮತ್ತು ಅನುಭವ ಹೊಂದಿರಬೇಕು.

ಈ. ಯೂವುದೇ ವ್ಯಕ್ತಿಯ ಅಥವಾ ವ್ಯಕ್ತಿಗಳ ಸಮೂಹಕ್ಕೆ ಲಾಭ ನಷ್ಟವಿಲ್ಲದ ಆದಾರದ ಮೇಲೆ ತರಬೇತಿ ಕಾರ್ಯಕ್ರಮಗಳನ್ನು ನಡೆಸಬೇಕು. ಜಿಲ್ಲಾ ಸಾಕ್ಷರತಾ ಸಮಿತಿಯನ್ನು ಸಹಾ ತರಬೇತಿ ನಡೆಸುವ ಪ್ರತಿನಿಧಿಯಾಗಿ ಗುರುತಿಸಬಹುದು. ಅವರು ಈಗಾಗಲೇ ಸಾಕ್ಷರತಾ ಆಂಧೋಲನವನ್ನು ಎನ್.ಎಲ್.ಎಮ್ ಸೂತ್ರದ ಪ್ರಕಾರ ಯಶಸ್ವಿಯಾಗಿ ಪೂರ್ಣಗೊಳಿಸಿದ್ದಲ್ಲಿ ಮತ್ತು ಉತ್ತರ ಸಾಕ್ಷರತಾ ಕಾರ್ಯಕ್ರಮಗಳನ್ನು ಪ್ರಾರಂಬಿಸಿದ್ದಲ್ಲಿ ಜಿಲ್ಲಾ ಸಾಕ್ಷರತಾ ಸಮಿತಿಯ ಪ್ರಕರಣಗಳಲ್ಲಿ ಸಂಪನ್ಮೂಲ ವ್ಯಕ್ತಿಗಳು, ತರಬೇತಿಯಲ್ಲಿ ಆಸಕ್ತಿ ವ್ಯಕ್ತಪಡಿಸಿದಲ್ಲಿ ಮತ್ತು ಸಂಪೂರ್ಣ ಸಾಕ್ಷರತಾ ಆಂಧೋಲನದ ಹಂತದಲ್ಲಿ ಬದ್ದರಾಗಿದ್ದಲ್ಲಿ ಅಂತಹವರನ್ನು ಗ್ರಾಮ ಪಂಚಾಯತಿ ಮಹಿಳಾ ತರಬೇತಿಗೆ ಗುರುತಿಸಬಹುದು.

ಈ ಕಾರ್ಯವಿಧಾನವೇನೇಯಿರಲಿ ಮಹಿಳೆಯರ ಸಲುವಾಗಿ ಸಮರ್ಥ ಸೇವೆ ಪ್ರದರ್ಶಿಸಿ, ತರಬೇತಿಯಲ್ಲಿ ಪ್ರಭುದ್ಧತೆ ಪಡೆದಿದ್ದಲ್ಲಿ, ಅಂತಹ ಸ್ವಯಂ ಸೇವಾ ಸಂಸ್ಥೆಗಳು ನೇರವಾಗಿ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ನೆರವಿಗಾಗಿ ಅರ್ಜಿ ಸಲ್ಲಿಸಬಹುದು.

## ತರಬೇತಿ ನಡೆಸುವ ಬಗ್ಗೆ

ಗ್ರಾಮ ಪಂಚಾಯತಿ ಮಹಿಳಾ ಸದಸ್ಯರಿಗೆ: ಅಧ್ಯಕ್ಷರಿಗೆ ಸಾಕಷ್ಟು ತರಬೇತಿ ನೀಡುವ ಸಲುವಾಗಿ ಗುರುತಿಸಲ್ಪಟ್ಟ ಸಂಪನ್ಮೂಲ ವ್ಯಕ್ತಿಗಳಿಗೆ ತರಬೇತಿ ನೀಡಲಾಗುವುದು. ಅನುಬಂಧ-IVರಲ್ಲಿ ಸಂಪನ್ಮೂಲ ವ್ಯಕ್ತಿಗಳಿಗೆ ತರಬೇತಿ ನೀಡಲು ಹಣಕಾಸಿನ ಅಂದಾಜು ನೀಡಲಾಗಿದೆ. ಜಿಲ್ಲಾ ಸಾಕ್ಷರತ ಸಮಿತಿ ಗುರುತಿಸಿದ ಈ ತರಬೇತಿ ಹೊಂದಿದ ಸಂಪನ್ಮೂಲ ವ್ಯಕ್ತಿಗಳು ಅಂದಾಜು 400-500 ಗ್ರಾಮ ಪಂಚಾಯತಿ ಮಹಿಳಾ ಸದಸ್ಯರಿಗೆ: ಅಧ್ಯಕ್ಷರಿಗೆ ಸುಮಾರು 35-40 ಮಹಿಳೆಯರ ಗುಂಪಿಗೆ 5 ದಿನದ ತರಬೇತಿ ಕಾರ್ಯಕ್ರಮ ನಡೆಸುವರು. ಅಂದರೆ ಪ್ರತಿ ತಿಂಗಳು 3 ತಂಡದಂತೆ ಮತ್ತು ನಾಲ್ಕು ತಿಂಗಳ ಅವಧಿಯಲ್ಲಿ 10 ತಂಡಗಳಿಗೆ ತರಬೇತಿ ನೀಡುವರು. ಈ ವಿಧಾನದಲ್ಲಿ ಪ್ರತಿ ಸಂಸ್ಥೆ ಅಥವಾ ಸಂಪನ್ಮೂಲ ವ್ಯಕ್ತಿಗಳು ಪ್ರತಿ ವರ್ಷ ಅದೇ ಮಹಿಳಾ ತಂಡಕ್ಕೆ 3 ತರಬೇತಿ ಕಾರ್ಯಕ್ರಮಗಳನ್ನು ನಡೆಸುವರು. ಅಂತಹ ಒಂದು ಮಾದರಿಗೆ ಹಣಕಾಸಿನ ವಿಧಾನ ಅನುಬಂಧ-V ರಲ್ಲಿಯಿದೆ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಅವಶ್ಯವಾದ ಹಣದ 2/3ರಷ್ಟನ್ನು ಭರಿಸುತ್ತದೆ. ಉಳಿದ ವೆಚ್ಚವನ್ನು ಸಂಬಂಧಪಟ್ಟ ಜಿಲ್ಲಾ ಪರಿಷತ್ ವಂತಿಕೆ: ಪಾಲು ರೂಪದಲ್ಲಿ ತರಬೇತಿ ಕಾರ್ಯಕ್ರಮಕ್ಕೆ ನೀಡುತ್ತದೆ. ಅನುಬಂಧ IV ಮತ್ತು V ರಲ್ಲಿ ಸೂಚಿತ ಹಣಕಾಸಿನ ವಿಧಾನವನ್ನು ತಿಳಿಸಿದ್ದರೂ ಜಿಲ್ಲೆಯಲ್ಲಿ ತರಬೇತಿ ಪಡೆಯಬೇಕಾದ ಗ್ರಾಮ ಪಂಚಾಯತಿ ಮಹಿಳಾ ಸದಸ್ಯರ ಸಂಖ್ಯೆ ಹಾಗೂ

ತರಬೇತಿ ನೀಡುವ ಸಂಸ್ಥೆಯ ಸಾಮರ್ಥ್ಯ ಮತ್ತು ಮಹಿಳೆಯರ ಅಧಿಕಾರ ವರ್ಧನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಇದರಲ್ಲಿ ಸೂಕ್ತ ಹೊಂದಾಣಿಕೆ ಮಾಡಲು ಅವಕಾಶವಿದೆ.

ಪ್ರತಿ ಜಿಲ್ಲೆಯಲ್ಲಿ ಸ್ಥಳೀಯ ಪರಿಸ್ಥಿತಿಗನುಗುಣವಾಗಿ ಬದಲಾವಣೆಗಳ ಅವಶ್ಯಕತೆಯಿದೆ. ಅದೇನೆ ಇರಲಿ ಈ ಮಾರ್ಗಸೂಚಿ ಮತ್ತು ತರಬೇತಿ ಕಾರ್ಯೋಪಾಯಗಳ ಹಿಂದಿನ ಉದ್ದೇಶವನ್ನು ಅರ್ಥಮಾಡಿಕೊಂಡು ಅದನ್ನು ಅನುಸರಿಸಬೇಕು.

## ಇರುವ ಸೌಲಭ್ಯಗಳ ಉಪಯುಕ್ತತೆ

ಜಿಲ್ಲಾ ಪರಿಷತ್ ಪ್ರಸ್ತಾವನೆಯನ್ನು ಸಲ್ಲಿಸುವಾಗ ಜಿಲ್ಲೆಯಲ್ಲಿರುವ ಭೌತಿಕ ಸೌಲಭ್ಯಗಳನ್ನು ಗುರುತಿಸಬೇಕು. ಜಿಲ್ಲಾ ತರಬೇತಿ ಸಂಸ್ಥೆಗಳು, ಅಂಗನವಾಡಿ ತರಬೇತಿ ಕೇಂದ್ರಗಳು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಕೇಂದ್ರಗಳು, ರೈತ ಶಿಕ್ಷಣ ಸಂಸ್ಥೆಗಳು, ಕೃಷಿ ವಿಜ್ಞಾನ ಕೇಂದ್ರಗಳು, ವಿದ್ಯಾಪೀಠ ಮುಂತಾದವುಗಳು ಅಂತಹ ಕಟ್ಟಡಗಳನ್ನು ಗುರುತಿಸಿ ಸಂಬಂಧಿಸಿದ ಪ್ರಾಂಶುಪಾಲರಿಗೆ ತಿಳಿಸುವುದರ ಮೂಲಕ ಗ್ರಾಮ ಪಂಚಾಯತಿ ಮಹಿಳಾ ಸದಸ್ಯರ ತರಬೇತಿಗೆ ಉಪಯೋಗಿಸಿಕೊಳ್ಳಬೇಕು. ಎಲ್ಲೆಲ್ಲಿ ಸ್ವಯಂ ಸೇವಾ ಸಂಸ್ಥೆಗಳು ತಮ್ಮ ಸ್ವಂತ ಸೌಲಭ್ಯಗಳನ್ನು ನೀಡಲು ಮುಂದೆ ಬರುವರೋ ಅಂತಹವುಗಳನ್ನು ಉಪಯೋಗಮಾಡಿಕೊಳ್ಳಬೇಕು. ಬಾಡಿಗೆಗಾಗಿ ಬೇರೆ ಹಣ ದೊರೆಯುವುದಿಲ್ಲ.

## ಜಿಲ್ಲಾಕೋರ್ ಗುಂಪು

ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳು ಅಥವಾ ಜಿಲ್ಲಾ ಪರಿಷತ್‌ನ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ಕೋರ್ ಗುಂಪನ್ನು ರಚಿಸಲಾಗುವುದು. ತರಬೇತಿ ನೀಡಲು ಗುರುತಿಸಲ್ಪಡುವ ಸಂಸ್ಥೆಗಳು ಇದರ ಸದಸ್ಯರಾಗಿರುತ್ತಾರೆ. ಜಿಲ್ಲಾ ಪರಿಷತ್‌ನ ಕನಿಷ್ಟ ಇಬ್ಬರು ಮಹಿಳಾ ಸದಸ್ಯರು ಕೋರ್ ಗುಂಪಿನ ಸದಸ್ಯರಾಗಿರುತ್ತಾರೆ. ಕೋರ್ ಗುಂಪಿನ ಸದಸ್ಯರಲ್ಲಿ ಒಬ್ಬರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ಗುರುತಿಸಲಾಗುವುದು. ಈ ತಂಡವು ಕನಿಷ್ಟ ತಿಂಗಳಿಗೊಮ್ಮೆ ಸಭೆ ಸೇರಿ ತರಬೇತಿಯ ಪರಿಮಾಣಾತ್ಮಕ ಮತ್ತು ಗುಣಾತ್ಮಕ ಬೆಳವಣಿಗೆಯನ್ನು ಪರಿಶೀಲಿಸುವುದು. ತರಬೇತಿಯ ಅನುಭವಗಳನ್ನು ಹಂಚಿಕೊಳ್ಳುವುದು. ಮುಂದಿನ ಕಾರ್ಯೋಪಾಯ ಮತ್ತು ಸದಸ್ಯ ಸಂಸ್ಥೆಗಳಿಗೆ ಹಣ ವಿತರಣೆ ಬಗ್ಗೆ ತೀರ್ಮಾನಗಳನ್ನು ತೆಗೆದುಕೊಳ್ಳುವುದು.

ಈ ಕೋರ್ ಗುಂಪು ಜಿಲ್ಲಾ ಮಟ್ಟದಲ್ಲಿ ಪಂಚಾಯತಿ ರಾಜ್ಯ ಸಂಸ್ಥೆಯ ತರಬೇತಿ ಕಾರ್ಯಕ್ರಮದ ಸಂಘಟನಾ ಸಂಸ್ಥೆಯಾಗಿರುತ್ತದೆ. ಇದು ತರಬೇತಿದಾರರನ್ನು ಗುರುತಿಸಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಸಂಪನ್ಮೂಲವನ್ನು ಸಜ್ಜುಗೊಳಿಸುತ್ತದೆ. ಇದು ಪ್ರಗತಿಯ ಉಸ್ತುವಾರಿ ಮಾಡುವುದಲ್ಲದೇ ಪರಿಣಾಮವನ್ನು ಮೌಲೀಕರಿಸುತ್ತದೆ.

## ಯೋಜನಾ ಪ್ರಸ್ತಾವನೆ

ತರಬೇತಿ ಕಾರ್ಯಕ್ರಮವನ್ನು ಅನುಷ್ಠಾನಕ್ಕೆ ತರಬಯಸುವ ಜಿಲ್ಲಾ ಪಂಚಾಯತ್ ಒಂದು ಯೋಜನಾ ವರದಿಯನ್ನು ಸಿದ್ಧಪಡಿಸಬೇಕು. ಅದು ಅನುಷ್ಠಾನದ ಕಾರ್ಯೋಪಾಯವನ್ನು ಹಾಗೂ ಈ ಕೆಳಕಂಡ ಇತರೆ ಅಂಶಗಳನ್ನು ಒಳಗೊಂಡಿರಬೇಕು.

1. ಕಾರ್ಯಕ್ಷೇತ್ರದ ವ್ಯಾಪ್ತಿ ಅಳವಡಿಸಿಕೊಳ್ಳಬೇಕಾದ ಕಾರ್ಯಕ್ಷೇತ್ರ ಬಿಂದು

2. ತರಬೇತಿ ಪಡೆಯಬೇಕಾದ ಪಂಚಾಯತ್ ರಾಜ್ಯ ಸಂಸ್ಥೆಯ ಮಹಿಳಾ ಸದಸ್ಯರ ಸಂಖ್ಯೆ, ಅವರ ವಯಸ್ಸು, ವಿದ್ಯಾರ್ಹತೆ, ಜಾತಿ, ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ.

3. ತರಬೇತಿ ಕಾರ್ಯಾಲಯವನ್ನು ನಡೆಸಲು ಗುರುತಿಸಲ್ಪಟ್ಟ ಸಂಸ್ಥೆಯ ಧ್ಯೇಯೋದ್ದೇಶ ಮತ್ತು ಚಟುವಟಿಕೆಗಳ ಬಗ್ಗೆ ಸಂಕ್ಷಿಪ್ತ ವಿವರಣೆ ಸಂಸ್ಥೆಯ ಅಪ್ಪಟತನವನ್ನು ಅದು ವಿವಿಧ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಬಗ್ಗೆ, ಅದರ ರಚನೆ, ಕಾರ್ಯಾಕಾರಿ ಸಮಿತಿಯ ವಿವರ, ಅದರ ಇತ್ತೀಚಿನ ವಾರ್ಷಿಕ ವರದಿ, ಎರಡು ವರ್ಷದ ಅದರ ಆಯವ್ಯಯದ ವಿವರ, ಹಿಂದಿನ ವರ್ಷದ ಲೆಕ್ಕಪತ್ರ ಮೊದಲಾದವುಗಳನ್ನು ನೋಡುವ ಮೂಲಕ ಜಿಲ್ಲಾ ಪಂಚಾಯತ್‌ಗೆ ಮೊದಲು ಸಾಕಷ್ಟು ಮನವರಿಕೆಯಾಗಬೇಕು. ಆದರೆ ಪ್ರಸ್ತಾವನೆಯ ಜೊತೆ ಈ ದಾಖಲೆಗಳೆಲ್ಲಾ ರವಾನಿಸುವ ಅವಶ್ಯಕತೆ ಇರುವುದಿಲ್ಲ.

4. ಕೋರ್ ಗುಂಪಿನ ರಚನೆ ಮತ್ತು ಕಾರ್ಯಗಳು

5. ಸಂಪನ್ಮೂಲ ವ್ಯಕ್ತಿಗಳಿಗೆ ಮತ್ತು ಪಂಚಾಯತ್ ರಾಜ್ಯ ಮಹಿಳಾ ಸದಸ್ಯರಿಗೆ ತರಬೇತಿಯ ಧ್ಯೇಯೋದ್ದೇಶಗಳು ಪ್ರತ್ಯೇಕವಾಗಿರಬೇಕು.

6. ತರಬೇತಿ ಸಿಬ್ಬಂದಿ ವರ್ಗದ ಲಭ್ಯತೆ, ಸಂಪನ್ಮೂಲ ವ್ಯಕ್ತಿಗಳನ್ನು ಆರಿಸುವ ಕಾರ್ಯವಿಧಾನ ಮತ್ತು ಇವರ ಆಯ್ಕೆಯಲ್ಲಿ ಗುರುತಿಸಬೇಕಾದ ವಿದ್ಯಾರ್ಹತೆ ಹಾಗೂ ಗುಣಗಳು.

7. ಸಂಪನ್ಮೂಲ ವ್ಯಕ್ತಿಗಳು ಮತ್ತು ಶಿಕ್ಷಕ ತರಬೇತುದಾರರ ತರಬೇತಿಯ ಅವಧಿ, ವಿಷಯಸೂಚಿ ಮತ್ತು ಹಂತ.

8. ಪಂಚಾಯತ್ ರಾಜ್ಯ ಸಂಸ್ಥೆಯ ಮಹಿಳಾ ಸದಸ್ಯರಿಗೆ ತರಬೇತಿ ಅವಧಿ ವಿಷಯ ಸೂಚಿ ಮತ್ತು ಹಂತ.

9. ತರಬೇತಿ ವಿಧಾನ ಉಪನ್ಯಾಸ ವಿಧಾನ - ಗುಂಪು ಚರ್ಚೆ - ಪಾತ್ರಾಭಿನಯ ಮತ್ತು ಅನುಕರಣೆ ವಿಷಯ ಪರಿಶೀಲನೆ ದೃಷ್ಟಿಃ ಶ್ರವಣ ಸಹಾಯಕ ತರಬೇತಿ.

F-4

10. ಪಂಚಾಯತ್ ರಾಜ್ಯ ಸಂಸ್ಥೆಯ ಮಹಿಳಾ ಸದಸ್ಯರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಪರಿಸ್ಥಿತಿಗನುಗುಣವಾದ ಬೋಧನಾ ಸಾಮಗ್ರಿಗಳು.

11. ವಾತಾವರಣ ಸೃಷ್ಟಿಸಲು ಜಾನಪದ, ಮುದ್ರಿತ, ರೇಡಿಯೋ, ಟಿವಿ ಮತ್ತು ವೀಡಿಯೋಗಳ ಉಪಯೋಗ.

12. ತರಬೇತಿ ನಡೆಸಲು ಲಭ್ಯವಿರುವ ಭೌತಿಕ ಸೌಲಭ್ಯಗಳು.

13. ಮೌಲ್ಯಮಾಪನ ವ್ಯವಸ್ಥೆ.

14. ಹಣಕಾಸಿನ ಅಂದಾಜು ಸಂಸ್ಥೆಯು ತನ್ನ ಸ್ವಂತ ಸಂಪನ್ಮೂಲದಿಂದ ಅಥವಾ ಸರಕಾರಿ, ಸರಕಾರೇತರ ಅಥವಾ ವಿದೇಶಿ ಸಂಪನ್ಮೂಲಗಳಿಂದ ಭಾಗಶಃ ಖರ್ಚನ್ನು ಭರಿಸುವಂತಿದ್ದರೆ ಅದನ್ನು ಸೂಚಿಸಬೇಕು.

15. ಸಂಬಂಧಿಸಿದ ಇತರೆ ವಿವರಗಳು

ಯೋಜನಾ ಪ್ರಸ್ತಾವನೆಯನ್ನು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳಾ ಅಭಿವೃದ್ಧಿ ಇಲಾಖೆ, ಇವರಿಗೆ ಸಲ್ಲಿಸಿದರೆ ಅವರು ಅದನ್ನು ರಾಜ್ಯ ಮಟ್ಟದಲ್ಲಿ ವಿಶೇಷವಾಗಿ ರಚಿಸಲಾಗಿರುವ ಸಮಿತಿಯ ಮುಂದೆ ಇಡುತ್ತಾರೆ. ಸಮಿತಿಯ ಅನುಮೋದನೆಯ ಅಧಾರದ ಮೇಲೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಅನುಷ್ಟಾನಗೊಳಿಸುವ ಸಂಸ್ಥೆಗೆ ನೇರವಾಗಿ ಅನುದಾನ ಬಿಡುಗಡೆ ಮಾಡುವರು.

ಯೋಜನೆಯು ಅನುಮೋದಿಸಲ್ಪಟ್ಟ ನಂತರ ಅನುಧಾನವನ್ನು (ಬಿಟ್ಟು ಅವಶ್ಯವಿರುವ 2:3 ರಷ್ಟು) ಜಿಲ್ಲಾ ಪಂಚಾಯತ್‌ಗೆ ಬಿಡುಗಡೆ ಮಾಡಲಾಗುವುದು. ಜಿಲ್ಲಾ ಪಂಚಾಯತ್ ಕಾರ್ಯಕ್ರಮದ ವೇಳಾ ಪಟ್ಟಿಗೆ ಅನುಗುಣವಾಗಿ ಅನುಷ್ಟಾನಗೊಳಿಸುವ ಸಂಸ್ಥೆಗೆ ಹಣ ವಿತರಣೆ ಮಾಡುವುದು. ದ್ವಿತೀಯ ಮತ್ತು ನಂತರದ ವರ್ಷಗಳಲ್ಲಿ ಅನುದಾನ ಬಿಡುಗಡೆ ಮೇಲಿನಂತೆ ಇರುವುದು. ಆದರೆ ಸಂಸ್ಥೆಯು ಹಿಂದಿನ ವರ್ಷದ ಅಂತ್ಯದವರೆಗೆ ಅನುದಾನ ಉಪಯೋಗ ಮಾಡಿದ ಬಗ್ಗೆ ಉಪಯುಕ್ತತಾ ಪತ್ರ ಮತ್ತು ಲೆಕ್ಕಪತ್ರ ಅಡಿಟ್ ಮಾಡಿಸಿದ ಪಟ್ಟಿಯನ್ನು ಸಲ್ಲಿಸಬೇಕಾಗುತ್ತದೆ.

# ಅನುಬಂಧ - II

## ಕರ್ನಾಟಕ ರಾಜ್ಯದ ಜಿಲ್ಲೆಗಳಲ್ಲಿ ಗ್ರಾಮ ಪಂಚಾಯತಿಗಳ ಸಂಖ್ಯೆ, ಒಟ್ಟು ಸ್ಥಾನಗಳ ಸಂಖ್ಯೆ ಹಾಗೂ ಮೀಸಲಿಟ್ಟಿರುರ ಸ್ಥಾನಗಳ ಸಂಖ್ಯೆಯನ್ನು ತೋರಿಸುವ ಪಟ್ಟಿ

| ಜಿಲ್ಲೆಯ ಹೆಸರುಗಳು | ಗ್ರಾಮ ಪಂಚಾಯತಿಗಳ ಸಂಖ್ಯೆ | ಒಟ್ಟು ಸ್ಥಾನಗಳು | ಮೀಸಲಿಟ್ಟಿರುವ ಸ್ಥಾನಗಳು | | | | ಅವುಗಳಲ್ಲಿ ಮಹಿಳೆಯರಿಗೆ ಮೀಸಲಿಟ್ಟಿರುವುದು | | | | ಚುನಾವಣಾ ಕ್ಷೇತ್ರಗಳ ಸಂಖ್ಯೆ | | | | | | ಒಟ್ಟು | ಮತ ದಾನದ ಬೂತ್‌ಗಳ ಸಂಖ್ಯೆ | ಮತದಾರರ ಸಂಖ್ಯೆ | |
|---|---|---|---|---|---|---|---|---|---|---|---|---|---|---|---|---|---|---|---|---|
| | | | ಪ.ಜಾ | ಪ.ವ | ಹಿಂ.ಜ | ಇತರೆ | ಪ.ಜಾ | ಪ.ವ | ಹಿಂ.ಜ | ಇತರೆ | 1 | 2 | 3 | 4 | 5 | 6 | | | ಮಹಿಳೆಯರ | ಪುರುಷರ |
| 1 ಬೆಂಗಳೂರು (ನಗರ) | 115 | 1723 | 450 | 118 | 570 | 585 | 139 | 115 | 185 | 180 | 119 | 297 | 298 | 29 | - | - | 749 | 749 | 242450 | 208586 |
| 2. ಬೆಂಗಳೂರು (ಗ್ರಾ) | 226 | 3533 | 767 | 249 | 1183 | 1334 | 319 | 228 | 459 | 521 | 307 | 714 | 519 | 59 | 1 | - | 1600 | 1616 | 487810 | 459659 |
| 3. ಚಿತ್ರದುರ್ಗ | 275 | 4159 | 974 | 734 | 1361 | 1090 | 400 | 344 | 540 | 447 | 370 | 741 | 769 | - | - | - | 1880 | 1898 | 584074 | 567655 |
| 4. ಕೋಲಾರ | 305 | 4385 | 1175 | 456 | 1447 | 1307 | 486 | 320 | 608 | 537 | 528 | 892 | 691 | - | - | - | 2111 | 2141 | 570194 | 552196 |
| 5. ಶಿವಮೊಗ್ಗ | 364 | 3565 | 940 | 409 | 1187 | 1029 | 425 | 367 | 483 | 464 | 273 | 647 | 666 | - | - | - | 1586 | 1615 | 472151 | 449184 |
| 6. ತುಮಕೂರು | 320 | 4931 | 1076 | 482 | 1642 | 1731 | 424 | 334 | 647 | 688 | 563 | 975 | 806 | - | - | - | 2344 | 2350 | 678540 | 651156 |
| 7. ಚಿಕ್ಕಮಗಳೂರು | 225 | 2203 | 548 | 234 | 729 | 692 | 250 | 225 | 301 | 311 | 203 | 441 | 326 | 35 | - | - | 1005 | 1059 | 293559 | 287125 |
| 8. ಮಂಗಳೂರು | 354 | 5182 | 950 | 426 | 1719 | 2087 | 399 | 359 | 689 | 813 | 50 | 533 | 735 | 404 | 49 | - | 1771 | 1955 | 643773 | 669733 |
| 9. ಹಾಸನ | 256 | 3422 | 785 | 260 | 1144 | 1233 | 312 | 256 | 467 | 501 | 364 | 785 | 496 | - | - | - | 1645 | 1658 | 456519 | 458635 |
| 10. ಕೊಡಗು | 96 | 1091 | 216 | 137 | 368 | 370 | 98 | 101 | 151 | 159 | 48 | 187 | 223 | - | - | - | 458 | 482 | 142048 | 140172 |
| 11. ಮಂಡ್ಯ | 228 | 3556 | 684 | 228 | 1188 | 1456 | 261 | 228 | 462 | 552 | 287 | 772 | 575 | - | - | - | 1635 | 1651 | 493898 | 470854 |
| 12. ಮೈಸೂರು | 361 | 5870 | 1409 | 457 | 1960 | 2044 | 567 | 375 | 756 | 801 | 360 | 1130 | 1082 | 1 | - | - | 2573 | 2585 | 736243 | 700565 |
| 13. ಬೆಳಗಾವಿ | 473 | 7206 | 1279 | 548 | 2393 | 2986 | 562 | 485 | 958 | 1142 | 98 | 803 | 1251 | 422 | 11 | 1 | 2586 | 2587 | 894889 | 883197 |
| 14. ಬಿಜಾಪುರ | 363 | 5677 | 1241 | 380 | 1893 | 2163 | 479 | 366 | 761 | 850 | 197 | 1269 | 870 | 83 | - | - | 2419 | 2425 | 730501 | 720617 |
| 15. ಧಾರವಾಡ | 439 | 5832 | 1176 | 492 | 1947 | 2217 | 484 | 438 | 768 | 872 | 184 | 1582 | 828 | - | - | - | 2594 | 2631 | 725334 | 686340 |
| 16. ಕಾರವಾರ | 209 | 2402 | 480 | 218 | 802 | 902 | 226 | 210 | 332 | 367 | 245 | 477 | 401 | - | - | - | 1123 | 1135 | 299647 | 285190 |
| 17. ಬಳ್ಳಾರಿ | 220 | 3374 | 794 | 435 | 1111 | 1034 | 312 | 267 | 445 | 411 | 106 | 548 | 563 | 117 | 3 | - | 1337 | 1337 | 413309 | 417502 |
| 18 ಬೀದರ್ | 176 | 2629 | 633 | 323 | 882 | 791 | 262 | 188 | 353 | 321 | 89 | 491 | 518 | 1 | - | - | 1098 | 1103 | 347523 | 340616 |
| 19. ಗುಲ್ಬರ್ಗ | 336 | 5095 | 1343 | 442 | 1706 | 1604 | 538 | 390 | 684 | 644 | 231 | 686 | 796 | 276 | - | - | 1989 | 2085 | 691336 | 657414 |
| 20. ರಾಯಚೂರು | 299 | 4781 | 988 | 542 | 1590 | 1661 | 394 | 334 | 633 | 641 | 396 | 858 | 595 | 221 | - | - | 2070 | 2143 | 567250 | 582559 |
| ಒಟ್ಟು ಮೊತ್ತ | 5640 | 80616 | 17908 | 7570 | 26822 | 28310 | 7317 | 5930 | 10684 | 11222 | 5018 | 14828 | 13005 | 1648 | 64 | 2 | 31300 | 35204 | 10471048 | 10190955 |

ಒಟ್ಟು ಸ್ಥಾನಗಳ ಸಂಖ್ಯೆ
80616
ಶೇಕಡಾವಾರು :

ಮಹಿಳೆಯರಿಗೆ ಮೀಸಲಿಟ್ಟಿರುವ ಸ್ಥಾನಗಳು
35153(43.60%)

| ಪ.ಜಾ. | ಪ.ವ | ಹಿಂ.ಜ: | ಇತರೆ |
|---|---|---|---|
| 22.21 | 9.39 | 33.27 | 35.13 |

ಪುರುಷರಿಗೆ ಸ್ಥಾನಗಳು
45463 (56.40%)

ಒಟ್ಟು ಮತದಾರರು
20632122

ಶೇಕಡ :
ಪುರುಷರು : 50.60
ಮಹಿಳೆಯರು : 49.40

# ಅನುಬಂಧ – III

# ಮಹಿಳೆಯರಿಗಾಗಿ ಪಂಚಾಯತಿ (ಅಥವಾ ನಾಯಕತ್ವ) ತರಬೇತಿ ಶಿಬಿರ 4 ದಿನಗಳು

**ಉದ್ದೇಶ :** 30-35 ಮಹಿಳೆಯರಿಗಾಗಿ ತರಬೇತಿ ನೀಡಿ ಅವರಿಗೆ :

1. ಸ್ಥಳೀಯ ಅಭಿವೃದ್ಧಿಗಾಗಿ ಮಹಿಳೆಯರು ಭಾಗವಹಿಸಲು ಮತ್ತು ತೀರ್ಮಾನ ತೆಗೆದುಕೊಳ್ಳಲು ಅವಶ್ಯಕವಾದ ಜ್ಞಾನ ಮತ್ತು ಕುಶಲತೆಯನ್ನು ನೀಡುವುದು (ಒದಗಿಸುವುದು)

2. ಪಂಚಾಯತಿ ಮಟ್ಟದ ಕಾರ್ಯಕರ್ತರಿಗೆ ಸಹಾಯ ಹಸ್ತ ನೀಡುವುದು ಅಥವಾ ಅವರೇ ಪಂಚಾಯತಿ ಮಟ್ಟದ ಸಫಲ ಕಾರ್ಯಕರ್ತರಾಗುವುದು.

## 1. ಮಾಹಿತಿ ಪರಿಕರಗಳು

| | |
|---|---|
| ಅ. ಪಂಚಾಯತಿ ಕಾನೂನುಗಳು | * ಚುನಾವಣಾ ವಿಧಾನ ಮತ್ತು ರಚನೆ<br>* ಅಧಿಕಾರ ಮತ್ತು ಕಾರ್ಯಗಳು<br>* ಸಭಾ ನಿಯಮಗಳು ಮತ್ತು ಕಾರ್ಯವಿದಾನಗಳು<br>* ಸಂಪನ್ಮೂಲ |
| ಆ. ಪಂಚಾಯತಿಯ ರಾಜಕೀಯ | * ಪಂಚಾಯತಿಗಳು ಏಕೆ ರಾಜಕೀಯ ಸಂಸ್ಥೆಗಳಾಗಿವೆ ? ಅವು ಏಕೆ ಕಾರ್ಯರಹಿತವಾಗಿದೆ ? ಕ್ರಮವಾದ ಕಾರ್ಯನಿರ್ವಹಣೆಗಿರುವ ಅಡಚಣೆಗಳೇನು ? |
| ಇ. ಪಂಚಾಯತಿಗಳ ಕಾರ್ಯಸೂಚಿ | * ವ್ಯಾಪ್ತಿ ಸಾಧ್ಯತೆಗಳು<br>* ಆರೋಗ್ಯ, ವಿಶೇಷತಾ : ನೈರ್ಮಲ್ಯ, ಕುಡಿಯುವ ನೀರು, ತಾಯಿ ಮತ್ತು ಮಗುವಿನ ರಕ್ಷಣೆ<br>* ಶಿಕ್ಷಣ.<br>* ವ್ಯವಸಾಯ, ನೀರಾವರಿ, ಭೂ ಮತ್ತು ನೀರಿನ ನಿರ್ವಹಣೆ<br>* ಅಭಿವೃದ್ಧಿ ಯೋಜನೆಗಳು<br>* ಮಹಿಳೆಯರ ನಿರ್ದಿಷ್ಟ ಅವಶ್ಯಕತೆಗಳು |
| ಈ. ಲಿಂಗ ಸಮಸ್ಯೆಗಳು | * ಮಹಿಳೆಯರ ತುಳಿತಕ್ಕೆ ಕಾರಣಗಳು |

* ಆರ್ಥಿಕ-ಸಾಮಾಜಿಕ, ಸಾಂಸ್ಕೃತಿಕ-ಪಿತೃ ಪ್ರಧಾನವಾದ ಜಾತಿ ವರ್ಗ
* ಸ್ತ್ರೀಯರ ಬಗ್ಗೆ ಇರುವ ತಪ್ಪು ಕಲ್ಪನೆಗಳು
* ಮಹಿಳೆಯರ ಚೇತರಿಸಿಕೊಳ್ಳುವ ಶಕ್ತಿ, ಅವರು ಹೇಗೆ ನಿಭಾಹಿಸುತ್ತಿದ್ದಾರೆ.
* ಮಹಿಳೆಯರ ಸಾಧನೆಗಳು
* ನಾಗರೀಕ ಮತ್ತು ರಾಜಕೀಯ ಹಕ್ಕುಗಳ ಬರವಣಿಗಳನ್ನು ನೀಡುವುದು.

ಉ. ಸ್ವಲ್ಪ ಮಟ್ಟಿಗೆ ಹೆಚ್ಚಿನ ಸಾಮಾಜಿಕ, ಆರ್ಥಿಕ ಹಿನ್ನೆಲೆಯನ್ನು ಪಂಚಾಯತಿ ಕಾರ್ಯಕ್ರಮಗಳಲ್ಲಿ ಮಂಡಿಸುವುದು.

## ತರಬೇತಿ ಉದ್ದೇಶಗಳು - 2

### 2. ಕುಶಲತೆಯು ವೃದ್ಧಿ

ಅ. ಗುಂಪು ಸಭೆಗಳನ್ನು ನಡೆಸುವುದು ಮತ್ತು ಚರ್ಚೆ

ಆ. ಕ್ರಮವಾದ ಮತ್ತು ಸದಾ ಚಟುಟವಿಕೆಗಳನ್ನು ಮತ್ತು ಕಾರ್ಯಕಮಗಳನ್ನು ನಿರ್ವಹಿಸುವ ಗುಂಪು ಇರಬೇಕು.

ಇ. ಉಪನ್ಯಾಸವೊಂದನ್ನು ನೀಡುವುದು

ಈ. ವರದಿಯೊಂದನ್ನು ಬರೆಯುವುದು

ಉ. ಆತ್ಮ ಸ್ಥೈರ್ಯವನ್ನು ಅಭಿವೃದ್ಧಿ ಪಡಿಸುವುದು

ಊ. ಇತರರು ಹೇಳುವುದನ್ನು ಕೇಳುವುದು ಮತ್ತು ಅರ್ಥಮಾಡಿಕೊಳ್ಳುವುದು.

ಋ. ಅರ್ಥಪೂರ್ಣವಾಗಿ ವರ್ತಮಾನ ಪತ್ರಿಕೆಗಳನ್ನು ಓದುವುದು

ಎ. ಈ ತರಬೇತಿ ಪಡೆದ ಪಂಚಾಯತಿ ಪ್ರತಿನಿಧಿಗಳು ಈ ಕೆಳಗಿನ ಅಂಶಗಳಲ್ಲಿ ಕುಶಲತೆ ಪಡೆಯುವವರು.

i. ಆಯವ್ಯಯ ಮತ್ತು ಖರ್ಚು ವೆಚ್ಚದ ನೈಪುಣ್ಯತೆಗಳು (ಆಯವ್ಯಯ ಲೆಕ್ಕಪತ್ರದ ಪಟ್ಟಿಯನ್ನು ಅರ್ಥಮಾಡಿಕೊಳ್ಳುವುದು!

ii. ಮಧ್ಯದಲ್ಲಿ ಬರುವ ಸಂಗತಿಗಳನ್ನು ದಾಖಲಿಸುವುದು

iii. ಮಾಹಿತಿಗಳನ್ನು ಪಡೆಯುವುದು ಹೇಗೆಂಬುದು?

# ಮಹಿಳೆಯರು ಮತ್ತು ಪಂಚಾಯತಿಗಳಿಗೆ ನಾಲ್ಕು ದಿನಗಳ ತರಬೇತಿ ಕಾರ್ಯಕ್ರಮದ ರೂಪುರೇಖೆಗಳು

## ಮೊದಲ ದಿನ

| ಸಮಯ | ಸಮಾವೇಶ | ಚಟುವಟಿಕೆ | ವಿಷಯ | |
|---|---|---|---|---|
| 9-30: | | | ಸಂಪ್ರದಾಯಿಕ ಉದ್ಘಾಟನಾ ಅಧಿವೇಶನ (ಐಚ್ಛಿಕ) | |
| 10-00 : | 1 | ಎ | ಪರಸ್ಪರ ಪರಿಚಯ<br>ಶಿಬಿರದಿಂದ ನಾವು ಏನನ್ನು ನಿರೀಕ್ಷಿಸುತ್ತೇವೆ?<br>ತರಬೇತಿ ಉದ್ದೇಶಗಳು | ಪರಿಚಯಾತ್ಮಕ ಅಧಿವೇಶನ |
| 12-30: | | | ಭೋಜನ | |
| 2-00 : | 2 | | ಭೂತ ಮತ್ತು ವರ್ತಮಾನ ಕಾಲದಲ್ಲಿ<br>ಅಸಮಾನತೆಯ ಬೇರುಗಳು | ಸಾಮಾಗ್ರಿ ಅಧಾರಿತ ಲಿಂಗ ಲಿಂಗ ಮಂಡನೆ |
| 3-30 : | 3 | ಬಿ | ಮಹಿಳೆಯರ ಬಗ್ಗೆ ತಪ್ಪು ಕಲ್ಪನೆ<br>(ಮಹಿಳೆಯರಿಂದಲೇ ಕಟ್ಟುಪಾಡಿಗೊಳಗಾಗಿರುವವರು | ಭಾಗವಹಿಸಿ ಕಲಿಯುವ ಅಧಿವೇಶನ |
| 6-00: | | ಸಿ | ಗುಂಪು ವ್ಯಾಯಾಮಗಳು, ಸೈಕಲ್ ಮತ್ತು ಯೋಗಾಭ್ಯಾಸ ಕಲಿಕೆ ಮತ್ತು ವ್ಯಾಯಮ<br>ಸಾಂಸ್ಕೃತಿಕ ಅಧಿವೇಶನ ಹಾಡಿನ ಕಲಿಕೆ | ಗುಂಪು ಚಟುವಟಿಕೆ |
| 8-00: | | ಡಿ | ದಿನಪತ್ರಿಕೆ ಓದುವುದು | ಭಾಗವಹಿಸುವುದು. |

# ಎರಡನೆ ದಿನ

| ಸಮಯ | ಸಮಾವೇಶ | ಚಟುವಟಿಕೆ | ವಿಷಯ | |
|---|---|---|---|---|
| 7-00 : | | ಇ | ವ್ಯಾಯಾಮ : ಸೈಕ್ಲಿಂಗ್ ಯೋಗಾಭ್ಯಾಸ | ಗುಂಪು ಚಟುವಟಿಕೆ |
| 9-00 : | | ಎಫ್ | ಹಿಂದಿನ ದಿನದ ಅದಿವೇಶನದ ಬಗ್ಗೆ ಅವಲೋಕನ | ಭಾಗವಹಿಸಿ ನೈಪುಣ್ಯವನ್ನು ಕಲಿಯುವ ಅಧಿವೇಶನ |
| 9-30 : | 4 | | ಪಂಚಾಯತಿಯ ಮೂಲ ಕಾನೂನು ಅರ್ಥ ಮಾಡಿಸುವುದು | ವಸ್ತು ಆಧಾರಿತ ಮಂಡನೆ |
| 12-20: | | ಜಿ | ಗುಂಪು ಕ್ರೀಡೆಗಳು | ಗುಂಪು ಚಟುವಟಿಕೆ |
| 12-30 : | 5 | | ಬಡತನದ ಮೂಲ ಅಸಮಾನತೆ ನಿರುದ್ಯೋಗ, ಭಾಗ-1 ಚಾರಿತ್ರಿಕ ಹಿನ್ನೆಲೆ | ವಸ್ತು ಆಧಾರಿತ ಮಂಡನೆ |
| 1-30 : | | | ಭೋಜನ ವಿರಾಮ | |
| 2-30 : | 6 | ಹೆಚ್ | ಒಂದು ಮಾದರಿ ಪಂಚಾಯತಿ | ಭಾಗವಹಿಸಿ ಕಲಿಯುವ ಅಧಿವೇಶನ |
| 5-00 : | | ಐ | ಹಾಡಿನ ಮೂಲಕ ಕಲಿಕೆ, ದಿನ ಪತ್ರಿಕೆ ವಾಚನ | ಗುಂಪು ಚಟುವಟಿಕೆಗಳು |
| 6-00 : | | ಜೆ | ಪಂಚಾಯತಿ ನಿಯಮಗಳನ್ನು ಓದುವುದು ಪರೀಕ್ಷೆ : ಪ್ರಶ್ನೋತ್ತರ | ಭಾಗವಹಿಸಿ ಕಲಿಯುವುದು |
| 7-00 : | 7 | | ಪಂಚಾಯತಿಗಳ ರಾಜಕೀಯ | ವಸ್ತು ಆಧಾರಿತ ಮಂಡನೆ |

# ಮೂರನೆಯ ದಿನ

| ಸಮಯ | ಸಮಾವೇಶ | ಚಟುವಟಿಕೆ | ವಿಷಯ | |
|---|---|---|---|---|
| 7-00 : | | ಕ | ಸೈಕ್ಲಿಂಗ್, ವಾಯು ವಿಹಾರ | ಗುಂಪು ಚಟುವಟಿಕೆಗಳು |
| 9-00 : | | ಎಲ್ | ಹಿಂದಿನ ದಿನದ ಅಧಿವೇಶನದ ಬಗ್ಗೆ ಮನನ ಮಾಡುವುದು ಪ್ರಶ್ನೆ ಕೇಳುವುದು | ಭಾಗವಹಿಸಿ ಕಲಿಯುವುದು |
| 9-30 : | | ಎಮ್ | ಆರೋಗ್ಯ, ಕುಡಿಯುವ ನೀರು ನೈರ್ಮಲ್ಯ, ಶಿಶು ರಕ್ಷಣೆ ಬಗ್ಗೆ ಯೋಜನೆ ಮಾಡುವುದು | ವಸ್ತು ಆಧಾರಿತ ಮಂಡನೆ ಪ್ರಕರಣವನ್ನು ಅನುಕರಿಸುವುದು |
| 1-25 : | | | ಭೋಜನ ವಿರಾಮ | |
| 2-15 : | 9 | | ಬಡತನದ ಮೂಲ ಅಸಮಾನತೆ (ಭಾಗ-2 ಸ್ವತಂತ್ರ ಭಾರತ) | ವಸ್ತು ಆಧಾರಿತ ಮಂಡನೆ |
| 3-00 : | 10 | | ಗ್ರಾಮೀಣ ಅಭಿವೃದ್ಧಿಗಾಗಿ ಯೋಜನೆ | ವಸ್ತು ಆಧಾರಿತ ಮಂಡನೆ |
| 4-30 : | 11 | ಎನ್ | ಗ್ರಾಮ ಭೇಟಿ : ಸಮೀಕ್ಷೆ : ನಕ್ಷೆ ತಯಾರಿಸುವುದು | ಭಾಗವಹಿಸಿ ಕಲಿಯುವ ಅಧಿವೇಶನ |
| 3-30 : | | | ಗ್ರಾಮ ಭೇಟಿಯ ಅನುಭವವನ್ನು ವಿನಿಮಯ ಮಾಡುವುದು. | –ಡಿಟೋ– |

# ನಾಲ್ಕನೇ ದಿನ

| ಸಮಯ | ಸಮಾವೇಶ | ಚಟುವಟಿಕೆ | ವಿಷಯ | |
|---|---|---|---|---|
| 7-00 : | | ಓ | ದೈಹಿಕ ಶಿಕ್ಷಣ ಸೈಕ್ಲಲಿಂಗ್ : | ಗುಂಪು ಚಟುವಟಿಕೆ |
| 9-30 : | 12 | | ಮಹಿಳೆಯರ ಸಾಧನೆ | |
| 10-15 : | 13 | | ಚಾಲ್ತಿಯಲ್ಲಿರುವ ಸರ್ಕಾರಿ ಅಭಿವೃದ್ಧಿ ಯೋಜನೆಗಳು ವಿಶೇಷತ ಮಹಿಳೆಯರಿಗಾಗಿ | ವಸ್ತು ಆಧಾರಿತ ಮಂಡನೆ ಮತ್ತು ಚಟುವಟಿಕೆ |
| 11-00 : | | ಪಿ | ಗುಂಪು ಕ್ರೀಡೆಗಳು | ಗುಂಪು ಚಟುವಟಿಕೆ |
| 11-30 : | 14 | | ಗ್ರಾಮ ಪಂಚಾಯತಿಯಲ್ಲಿ ಮಹಿಳೆಯರ ಪಾತ್ರ ಸಮಸ್ಯೆಗಳು ಕ್ಯೂ ಸಮಸ್ಯೆಗಳ ಬಗ್ಗೆ ವ್ಯಕ್ತಿ ಮಟ್ಟದಲ್ಲಿ ಚರ್ಚೆ | ವಸ್ತು ಆಧಾರಿತ ಮಂಡನೆ ಭಾಗವಹಿಸಿ ಕಲಿಯುವುದು |
| 1-30 : | | | ಭೋಜನ ವಿರಾಮ | |
| 2-00 : | 15<br>16 | | ಕಾರ್ಯಯೋಜನೆ<br>ಆರ್ ಮೌಲ್ಯಮಾಪನ<br>ಮುಕ್ತಾಯ ಸಮಾರಂಭ | ಐಚ್ಛಿಕ |



F-6

# ಅಧಿವೇಶನಗಳ ಕುರಿತು

ಇಲ್ಲಿ ಉದ್ದೇಶಿಸಿರುವ ಅಧಿವೇಶನಗಳು ಎರಡು ವಿಧಗಳಾಗಿರುತ್ತವೆ. ಒಂದು ವರ್ಗವು (ಅಂಕಿ ನಮೂದಿಸಿರುವ) ವಿವಿಧ ವಿಷಯಗಳ ಮೇಲೆ ಮಾಹಿತಿಯನ್ನು ಒಳಗೊಂಡಿರುತ್ತದೆ. ಇಲ್ಲಿ ಮುಖ್ಯ ಅಂಶವೆಂದರೆ ಈ ಮಾಹಿತಿಯನ್ನು ಪುನಃ ಓದಲು ಅನುಕೂಲವಾಗುವಂತೆ ಬರವಣಿಗೆಯಲ್ಲಿ ನೀಡಲಾಗಿದೆ. ಇದನ್ನು ತರಬೇತಿ ಪಡೆಯುವವರಿಗೆ ಅವಶ್ಯವೆನಿಸಿದಾಗ ಉಲ್ಲೇಖಿಸಬಹುದು ಮತ್ತು ತಿಳಿಸಿ ಹೇಳಬಹುದು. ಈ ಮಾಹಿತಿಯನ್ನು ಸುಲಭ ಮತ್ತು ಆಕರ್ಷಣೀಯವಾದ ರೂಪದಲ್ಲಿ ಮಂಡಿಸಬಹುದು. ಅಂತಹ ವಸ್ತುಸಾಮಾಗ್ರಿಗಳು ಮಾಹಿತಿಯನ್ನು ಇತರರಿಗೆ ತಲುಪಿಸಲು ಸಹಾಯಕವಾಗುತ್ತದೆ.

ಎರಡನೆಯ ವಿಧವಾದ ಅಧಿವೇಶನವು ಭಾಗವಹಿಸಿಲ್ಪಡುವ ರೂಪದಲ್ಲಿರುತ್ತದೆ. ಕೆಲವು ದೃಷ್ಟಾಂತಗಳನ್ನು ಇಲ್ಲಿ ನೀಡಲಾಗಿದೆ. ಆದರೆ ಅವು ಸಂಪೂರ್ಣವಲ್ಲ. ಸ್ಥಳೀಯ ಅವಶ್ಯಕತೆಗನುಗುಣವಾಗಿ ಈ ಅಧಿವೇಶನಗಳನ್ನು .ವಿಸ್ತರಿಸಬಹುದು ಹಾಗೂ ಬದಲಾಯಿಸಬಹುದು. ಪರಸ್ಪರ ಪರಿಣಾಮ ಬೀರುವ ಈ ಅಧಿವೇಶನವು ನೈಪುಣ್ಯತೆ ಮತ್ತು ವ್ಯಕ್ತಿತ್ವ ವಿಕಾಸಕ್ಕೆ ಕಾರಣವಾಗುವುದರಿಂದ ಬಹಳ ಮುಖ್ಯವಾದುದು. ತರಬೇತಿ ಪಡೆಯುವವರಲ್ಲಿ ಇರುವ ಹಿಂಜರಿಕೆಯನ್ನು ಹೋಗಲಾಡಿಸಿ ಪ್ರೋತ್ಸಾಹಿಸಬೇಕು. ಅವರಲ್ಲಿ ಸ್ಥೈರ್ಯ ಬರುವಂತೆ ಇತರರು ಹೇಳ ಬಯಸುವ ಬಗ್ಗೆ ಅವರು ವಿಮರ್ಶಾತ್ಮಕವಾಗಿ ತಿಳಿಸುವಂತೆ, ತಾವೇ ಯೋಚಿಸುವಂತೆ ಸಂಪರ್ಕ ಮತ್ತು ಸಂಸ್ಥೆಗಳ ಬಗ್ಗೆ ಕನಿಷ್ಠ ನೈಪುಣ್ಯತೆಯನ್ನು ಹೊಂದುವಂತೆ ಪ್ರೋತ್ಸಾಹಿಸಬೇಕು.

ನಾಲ್ಕು ದಿನಗಳ ಪ್ರಾಸ್ತಾವಿಕ ತರಬೇತಿ ಶಿಬಿರಕ್ಕಾಗಿ ಪ್ರಾರಂಭಿಕ ಪ್ರಸ್ತಾವನೆಯನ್ನು ಸಿದ್ಧಪಡಿಸಲಾಗಿದೆ. ಅದರೂ ವೇಳಾಪಟ್ಟಿಯ ಬದಲಾವಣೆ ಅವಶ್ಯಕತೆ ಇದ್ದಲ್ಲಿ ಸಲಹೆ ಮಾಡಿರುವ ವಸ್ತು ಸಾಮಾಗ್ರಿಗಳನ್ನು ಐದು ದಿನದ ಶಿಬಿರಕ್ಕೆ ವಿಸ್ತರಿಸಬಹುದು. ಇದಲ್ಲದೇ ಅನುಸರಣಾ ಶಿಬಿರಗಳನ್ನು ಕೆಲವು ನಿರ್ದಿಷ್ಟ ಕ್ಷೇತ್ರಗಳಲ್ಲಿ ಉದಾ: ಆರೋಗ್ಯ ಯೋಜನೆಯ ಬಗ್ಗೆ ನಾಲ್ಕು ದಿನದ ಪಂಚಾಯತಿ ಮಟ್ಟದ ಶಿಬಿರ ಅಥವಾ ಭೂಮಿ ಮತ್ತು ನೀರಿನ ನಿರ್ವಹಣೆ ಬಗ್ಗೆ 7 ದಿನಗಳ ಶಿಬಿರ ಅಲ್ಲದೇ ಪ್ರಾಥಮಿಕ ಶಿಕ್ಷಣ ಕೈಗಾರಿಕಾ : ತಯಾರಿಕಾ ಕ್ಷೇತ್ರದಲ್ಲಿ ಉದ್ಯೋಗ ಸೃಷ್ಟಿ ಮಾಡುವ ಶಿಬಿರ ಹಾಗೂ ನಾಗರೀಕ ಮತ್ತು ರಾಜಕೀಯ ಹಕ್ಕುಗಳ ಶಿಬಿರಗಳನ್ನು ಕ್ರಮೇಣ ನಡೆಸಬಹುದು.

- 30 ಮಂದಿ ತರಬೇತಿ ಪಡೆಯುವವರು ಒಂದು ಶಿಬಿರಕ್ಕೆ ಸೂಕ್ತವಾಗಿರುತ್ತಾರೆ.
- ಗರಿಷ್ಟ 50 ಮಂದಿ ತರಬೇತಿ ಪಡೆಯುವವರು (ನಾಲ್ಕು ದಿನಗಳಿಗೆ 2 ಅಥವಾ 3 ಸಂಪನ್ಮೂಲ ವ್ಯಕ್ತಿಗಳು ಇರಬಹುದು)

— ತರಬೇತಿ ಪಡೆಯುವವರು ಕನಿಷ್ಟ 15 ಮಂದಿ ಇರಬೇಕು.

— ಸ್ಥಳ : ಸ್ವಲ್ಪ ದೂರದಲ್ಲಿದ್ದರೆ ಶಿಬಿರವು ಉತ್ತಮವಾಗಿರುತ್ತದೆ. ವಿಶೇಷವಾಗಿ ಭಾಗವಹಿಸುವ ಮಹಿಳೆಯರ ಮನೆಗಳಿಂದ ದೂರವಿದ್ದರೆ ಅವರ ಮನೆಗೆಲಸಕ್ಕೆ ಹಿಂದಿರುಗುವಂತೆ ಅವರ ಮೇಲೆ ಹೆಚ್ಚಿನ ಒತ್ತಾಯವಿರುವುದಿಲ್ಲ. ಅಲ್ಲದೇ ಸ್ವಚ್ಛವಾದ ಶಾಂತಿಯುತವಾದ ವಾತಾವರಣ ಇರಬೇಕು. ಅಲ್ಲಿ ಹೆಚ್ಚಿನ ಗಲಭೆ ಇಲ್ಲದೆ ಎಲ್ಲಿಯಾದರೂ ಮಹಿಳೆಯರು ವ್ಯಾಯಮ ಮಾಡಲು ಸೈಕಲ್ ಕಲಿಯಲು ಮತ್ತು ವಾಯು ಸಂಚಾರ ಮಾಡಲು ಸ್ಥಳವಿರಬೇಕು.

## ಅಧಿವೇಶನ -1

### ಚಟುವಟಿಕೆ -ಎ

### *ಸ್ವಯಂ ಪರಿಚಯ : ಶಿಬಿರದ ಉದ್ದೇಶ*

**ಉದ್ದೇಶಗಳು**

* ತರಬೇತಿ ಪಡೆಯುವವರು ಪರಸ್ಪರ ಹೆಸರು ಮತ್ತು ಅವರ ಬಗ್ಗೆ ತಿಳಿದುಕೊಳ್ಳಲು ಅನುವು ಮಾಡಿಕೊಡುವುದು
* ಶಿಬಿರದಲ್ಲಿ ಭಾಗವಹಿಸಲು ಅನುಕೂಲವಾಗುವಂತೆ ತರಬೇತಿ ಪಡೆಯುವವರು ತಮ್ಮ ಬಗ್ಗೆ ಮಾತನಾಡುವಷ್ಟು ಪರಿಚಯ ಮಾಡಿಕೊಳ್ಳಬೇಕು.
* ತರಬೇತಿ ಪಡೆಯುವವರು ಶಿಬಿರದ ಬಗ್ಗೆ ಏನು ನಿರೀಕ್ಷಣೆಯಿಂದ ಬಂದಿದ್ದಾರೆ ಎಂಬುದನ್ನು ತಿಳಿದುಕೊಳ್ಳುವುದು ಮತ್ತು ಅದನ್ನು ಟಿಪ್ಪಣಿ ಮಾಡಿಕೊಳ್ಳುವುದು.
* ತರಬೇತಿ ಪಡೆಯುವವರು ಶಿಬಿರದ ಉದ್ದೇಶಗಳನ್ನು ತಿಳಿಯಲು ನೆರವಾಗುವುದು.

**ಚಟುವಟಿಕೆಗಳು : ವಿಧಾನ**

1. ಸಂಪನ್ಮೂಲ ವ್ಯಕ್ತಿಗಳು ಉದಾಹರಣೆಯಾಗಿ ತಮ್ಮ ಪರಿಚಯ ಮಾಡಿಕೊಂಡು ಇತರೆ ಸದಸ್ಯರು ಪರಸ್ಪರ ಮಾಡಿಕೊಡಲು ನೆರವಾಗಬೇಕು.
2. ಹೆಸರು ಹೇಳುವ ಚೆಂಡಾಟ, ಉದಾಹರಣೆಗೆ : ತರಬೇತಿ ಪಡೆಯುವವರು ವೃತ್ತಾಕಾರವಾಗಿ ನಿಲ್ಲುವುದು ಒಬ್ಬ ವ್ಯಕ್ತಿ ತನ್ನ ಬಲಗಡೆಯಲ್ಲಿವವರ ಹೆಸರನ್ನು ಹೇಳುವುದರ ಮೂಲಕ ಆಟವನ್ನು ಪ್ರಾರಂಭಿಸುವುದು. ಒಂದು ವೇಳೆ ಆ ವ್ಯಕ್ತಿಯ ಹೆಸರು ಜ್ಞಾಪಕವಾಗದಿದ್ದಲ್ಲಿ ಆಕೆಗೆ ಚೆಂಡನ್ನು ಕೊಡುವುದು. ಈ ರೀತಿ ಆಟವನ್ನು ಮುಂದುವರಿಸುವುದು.
3. ಒಬ್ಬೊಬ್ಬರು ಒಂದೊಂದು ವಾಕ್ಯ, ಹೇಳುವಂತಹ ಆಟವನ್ನು ಸಾಲಾಗಿ ನಿಲ್ಲಿಸಿ ಆಡುವುದು (ಉದಾಹರಣೆಗೆ : ನಾನು ಜನರನ್ನು ಭೇಟಿಯಾಗಲು ಇಷ್ಟಪಡುತ್ತೇನೆ. ನನಗೆ ಬೇಗನೆ ಕೋಪ ಬರುತ್ತದೆ ಇತ್ಯಾದಿ)
4. ಪ್ರತಿಯೊಬ್ಬರು ಶಿಬಿರದ ಬಗ್ಗೆ ಅವರು ಏನನ್ನು ನಿರೀಕ್ಷಿಸುತ್ತಾರೆ ಅದನ್ನು ಎರಡು ಸಾಲಿನಲ್ಲಿ ಹೇಳುತ್ತಾರೆ ಮತ್ತೆ ಎರಡನೆ ಸುತ್ತಿನಲ್ಲಿ ಬೇರೆಯವರು ಏನು ಹೇಳಿದರು ಯಾವ ಅಂಶ ಅವರಿಗೆ ಇಷ್ಟವಾಯಿತು ಅಥವಾ ಬಹಳ ಮುಖ್ಯವೆಂದು ಅವರು ತಿಳಿದುಕೊಂಡ ಅಂಶ ಮತ್ತು ಅದನ್ನು ಯಾರು ಹೇಳಿದರು.
5. ಸಂಪನ್ಮೂಲ ವ್ಯಕ್ತಿಗಳು ಶಿಬಿರದ ವ್ಯಕ್ತಿಗಳನ್ನು ಮತ್ತು ವೇಳಾಪಟ್ಟಿಯನ್ನು ವಿತರಣೆ ಮಾಡಿ. ಕಾರ್ಯಕ್ರಮದ ಬಗ್ಗೆ ವಿವರಿಸುವುದು

# ಅಧಿವೇಶನ-2

## ಲಿಂಗ ಅಸಮಾನತೆಯ ಮೂಲಗಳು

**ಉದ್ದೇಶಗಳು**

ಎ. ಲಿಂಗ ಅಸಮಾನತೆಯ , ಬಗ್ಗೆ ಸಾಕಷ್ಟು ಅಂಕಿ ಅಂಶಗಳಿವೆ. ಆದರೆ ಇದನ್ನು ಅರ್ಥಮಾಡಿಕೊಂಡ ವ್ಯಕ್ತಿಗಳು ಬಹಳ ವಿರಳ ಪುರಾತನ ಕಾಲದಲ್ಲಿ ಪಾಳೇಗಾರರ ಕಾಲದಲ್ಲಿ ಮತ್ತು ಆಧುನಿಕ ಕಾಲದಲ್ಲಿ ಮಹಿಳೆಯ ಸ್ಥಾನಮಾನ ಏಕೆ ಹಾಗಿತ್ತು. ಮತ್ತು ಏಕೆ ಹೀಗಿದೆ, ಎಂಬುದರ ಬಗ್ಗೆ ಮೂಲ ಮಾಹಿತಿಯನ್ನು ನೀಡಬೇಕು.

ಬಿ. ಮಹಿಳೆಯರ ಶೋಷಣೆ ಪ್ರಾರಂಭದಲ್ಲಿತ್ತು ಈಗ ಅದಕ್ಕೆ ಕೊನೆಯುಂಟು ಎಂಬ ಧೈರ್ಯವನ್ನು ಉಂಟು ಮಾಡಬೇಕು.

**ಚಟುವಟಿಕೆ : ವಿಧಾನ :**

ಈ ವಿಷಯದ ಬಗ್ಗೆ ಸಂಪನ್ಮೂಲ ವ್ಯಕ್ತಿಗಳಿಂದ 45 ನಿಮಿಷದ ಮಂಡನೆ

ಮಂಡನೆಯ ಮೊದಲು ಅಥವಾ ನಂತರ ತರಬೇತಿ ಪಡೆಯುವವರು ಸಣ್ಣಗುಂಪುಗಳಲ್ಲಿ ಓದಬೇಕು (ತರಬೇತಿ ಪಡೆಯುವವರು ಎತ್ತಿದ ಸಂಶಯಗಳಿಗೆ ಅವರ ಉತ್ತರ ಕೊಡಬೇಕು. ಅವಶ್ಯಕವಿದ್ದರೆ ಸಂಪನ್ಮೂಲ ವ್ಯಕ್ತಿಗಳ ನೆರವು ಪಡೆಯಬೇಕು)

# ಅಧಿವೇಶನ -3

## ಚಟುವಟಿಕೆ (ಬಿ)

*ವಿಷಯ : ಸ್ತ್ರೀಯರ ಬಗ್ಗೆ ತಪ್ಪು ಕಲ್ಪನೆಗಳು*

## ಉದ್ದೇಶಗಳು

ಎ. ಮಹಿಳೆಯರ ಬಗ್ಗೆ ಮಹಿಳೆಯರಲ್ಲಿಯೇ ಅಂತರ್ಗತವಾಗಿರುವ ತಪ್ಪು ಕಲ್ಪನೆಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಶಿಸಲು ಮತ್ತು ಅಂತಹ ಕಲ್ಪನೆಗಳನ್ನು ತಿರಸ್ಕರಿಸಲು ನೆರವಾಗಬೇಕು. ಹಲವು ವೇಳೆ ಇಂತಹ ಕಲ್ಪನೆಗಳೇ ಮಹಿಳೆಯರ ಸಂಘಟನೆಗೆ ಅಡ್ಡಿ ಆತಂಕಗಳನ್ನು ಉಂಟುಮಾಡುತ್ತವೆ. ಆದ್ದರಿಂದ ಅವುಗಳನ್ನು ಕಿತ್ತೊಗೆಯಬೇಕು.

ಬಿ. ಈ ಮಹಿಳೆಯರು ಏಕೆ ಇಂತಹ ಕಲ್ಪನೆಗಳು ತಪ್ಪು ಎಂಬುದನ್ನು ಬೇರೆ ಮಹಿಳೆಯರಿಗೆ ಹೇಳಲು ಶಕ್ತರಾಗುವಂತೆ ನೆರವಾಗಬೇಕು.

ಸಿ. ಗುಂಪು ಚರ್ಚೆಗಳನ್ನು ಹೇಗೆ ನಡೆಸಬೇಕು ಎಂಬುದನ್ನು ಅರ್ಥಮಾಡಿಕೊಳ್ಳಲು ಮಹಿಳೆಯರಿಗೆ ನೆರವಾಗಬೇಕು (ಒಂದರಲ್ಲಿ ಭಾಗವಹಿಸುವುದು ಒಂದನ್ನು ನಡೆಸುವುದು ಮತ್ತು ಚರ್ಚೆಯ ಸಾರಾಂಶಗಳನ್ನು ಗ್ರಹಿಸುವುದು.

**ಟಿಪ್ಪಣಿ:** ಮಹಿಳೆಯರು ಚರ್ಚಿಸುವ ತಪ್ಪು ಕಲ್ಪನೆಗಳು ಆ ಗುಂಪಿನ ಮಹಿಳೆಯರಲ್ಲಿರುವ ಕಲ್ಪನೆಗಳು ಮತ್ತು ಕ್ಷೇತ್ರವನ್ನು ಅವಲಂಬಿಸಿವೆ. (ಮಹಿಳೆಯರಲ್ಲಿ) ಒಂದೆರಡು ಉದಾಹರಣೆಗಳನ್ನು ಕೊಡಬಹುದು.

i. ಮಹಿಳೆಯೇ ಮಹಿಳೆಯ ಪರಮ ಶತ್ರು.

ii. ಕರ್ತವ್ಯ ಪರ ಮಹಿಳೆಯ ವ್ಯಕ್ತಿತ್ವ (ಸಾಮಾಜಿಕ ಕುಟುಂಬದ ನಿರೀಕ್ಷಣೆ)

iii. ಪುರುಷನಿಗಿಂತಲೂ ಮಹಿಳೆ ಸ್ವಾಭಾವಿಕವಾಗಿ (ದೇಹರಚನೆಯಿಂದಾಗಿ) ದುರ್ಬಲಳು ಎಂಬ (ಕೀಳರಿಮೆ)

iv. ಮಹಿಳೆಯರು ಸಣ್ಣ -ಪುಟ್ಟ ಜಗಳಗಳಿಗೆ ಒಳಗಾಗುವುವವರು ಮತ್ತು ಅಸೂಯಾಪರರು ಅವರು ಒಳ್ಳೆಯ ಸಂಘಟಿತರಾಗಿರುವುದಿಲ್ಲ.

v. (ಪುರುಷರಂತಲ್ಲದೆ) ಮಹಿಳೆಯರಿಗೆ ಮನೆಯೇ ಪ್ರಥಮ ಜವಾಬ್ದಾರಿ. ಆದುದರಿಂದ ಅವರು ಸಂಸ್ಥೆಯ ಕಾರ್ಯಗಳಿಗೆ ಹೆಚ್ಚು ಕಾಲವ್ಯಯ ಮಾಡುವಂತಿಲ್ಲ.

vi. ಹೆಣ್ಣು ಒಂದು ಹೊರೆ. ಇತ್ಯಾದಿ.

**ಚಟುವಟಿಕೆಗಳು : ವಿಧಾನ :**

ಎ. ಶಿಬಿರಾರ್ಥಿಗಳನ್ನು ಎ,ಬಿ,ಸಿ. ಎಂಬ ಸಣ್ಣ ಗುಂಪುಗಳಾಗಿ ವಿಭಾಗಿಸಬೇಕು. ಪ್ರತಿ ಗುಂಪನ್ನು ಪುನಃ ಉಪಗುಂಪುಗಳನ್ನಾಗಿ 7ರಿಂದ 10ಮಂದಿ ಇರುವ ಹಾಗೆ ವಿಭಾಗಿಸಬೇಕು. (ಎ1, ಎ2,ಬಿ1,ಬಿ2ಸಿ1,ಸಿ2) ಪ್ರತ್ತಿ ಗುಂಪಿಗೂ ಒಂದು ವಿಷಯವನ್ನು ಕೊಡಬೇಕು. ಅದು ಒಬ್ಬ ಅಧ್ಯಕ್ಷನನ್ನು ಮತ್ತು ಒಬ್ಬ ವರದಿಗಾರನನ್ನು ಆರಿಸುತ್ತದೆ. ಗುಂಪು ಚರ್ಚೆ ಪ್ರಾರಂಭಿಸಿ ಕಲ್ಪನೆಗಳಿಗೆ ಉತ್ತರಿಸುವುದನ್ನು (ಕೆಲವು ಪರಿಕರಗಳನ್ನು ಅವರ ಪಾತ್ರಗಳಿಗೆ ಅನುಗುಣವಾಗಿ ಕೊಡಬೇಕು) ತಿಳಿದುಕೊಳ್ಳುತ್ತದೆ. ಉಪಗುಂಪು ನಂತರ ವಿಷಯವನ್ನು ಸುಮಾರು 20ನಿಮಿಷಗಳವರೆಗೆ ಚರ್ಚಿಸಿ ಒಂದು ಒಮ್ಮತಕ್ಕೆ ಬರುತ್ತದೆ. (ಉಪಗುಂಪು ಎ2, ಉಪಗುಂಪು ಎ1ರ ಸುತ್ತ ಮೌನವಾಗಿ ಕುಳಿತಿರುತ್ತದೆ) ಈಗ ಚರ್ಚೆ ಹೇಗಾಯಿತು ಎಂಬುದರ ಬಗ್ಗೆ ಮಾತಾನಾಡುತ್ತಾರೆ. ಎಲ್ಲರೂ ಚರ್ಚೆಯಲ್ಲಿ ಭಾಗವಹಿಸಿದ್ದರೆ? ಇಲ್ಲವೆ? ಎಂದು ಇತ್ಯಾದಿ. ನಂತರ ಉಪ ಗುಂಪು ಎ2,ಉಪಗುಂಪು ಎ1ರ ಜೊತೆ ವಿಷಯವನ್ನು ಚರ್ಚಿಸುತ್ತದೆ ಮತ್ತು ಅಂತಿಮವಾಗಿ ವಿವರಣೆ ಮಾಡುತ್ತದೆ.

ಬಿ. ಜಂಟಿ ಅಧಿವೇಶನದಲ್ಲ ಪ್ರತಿ ಉಪಗುಂಪು ಕಲ್ಪನೆಯ ಜೊತೆ ತನ್ನ ಅನಿಸಿಕೆಗಳನ್ನು ಮೂಡಿಸುತ್ತದೆ. ಸಂಪನ್ಮೂಲ ವ್ಯಕ್ತಿಗಳು ಅದರ ಸಾರಾಂಶವನ್ನು ನೀಡುತ್ತಾರೆ.

**ಚಟುವಟಿಕೆ – ಸಿ**

ಈಗಾಗಲೇ ದೀರ್ಘವಾದ ಹೆಚ್ಚಿನ ಅಧಿವೇಶನಗಳಾಗಿವೆ. ಸಾಕಷ್ಟು ಮಹಿಳೆಯರು ಇಂತಹ ದೀರ್ಘ ಚರ್ಚೆಗಳಿಗೆ ಒಳಗಾದವರಲ್ಲಿ ಕೆಲವರಿಗೆ ಬಳಲಿಕೆಯಾಗಿರಬಹುದು. ಕೆಲವರು ಸರಿಯಾಗಿ ನಿರ್ವಹಿಸದ ಕಾರಣ ಬಹುತೇಕ ಆತಂಕಗೊಂಡಿದ್ದಾರೆ. ಇತರರು ಪ್ರಯಾಣ ಮಾಡಿದ್ದರಿಂದ ಆಯಾಸಗೊಂಡಿರಬಹುದು. ಗುಂಪು ಹವಣಿಕೆ ಇನ್ನು ದುರ್ಬಲವಾಗಿದೆ. ಈಗ ವಿನೋದಕ್ಕೆ ಸ್ವಲ್ಪ ಸಮಯ ಸಿಕ್ಕಿದೆ. ಗುಂಪು ವ್ಯಾಯಾಮದಿಂದ ವಿರಮಿಸುವುದನ್ನು ಕಾಣಬಹುದು. ನೋಡಬಹುದಾದ ಸ್ಥಳವಿದ್ದಲ್ಲಿ ಸ್ವಲ್ಪ ನಡೆಯಬಹುದು. ಖಂಡಿತವಾಗಿ ಕೆಲವು ಮಹಿಳೆಯರಿಗೆ ಸೈಕಲ್ ಕಲಿಯುವ ಅಸಕ್ತಿ ಇದೆ. ಈಗ ಅದಕ್ಕೆ ಸಮಯವಿದೆ. ಗುಂಪು ವ್ಯಕ್ತಿಗಳಾಗಿ ಚದರುವುದಕ್ಕೆ ಅವಕಾಶ ಕೊಡದೆ ಬೇರೆ ಬೇರೆ ಚಟುವಟಿಕೆಗಳನ್ನು ನಡೆಸಲು ಬೇರೆ ಬೇರೆ ಗುಂಪುಗಳಿಗೆ ಐಚ್ಛಿಕ ಅವಕಾಶ ನೀಡಬಹುದು. ನಂತರ ಬಹುಶಃ ಅವರೆಲ್ಲರೂ ಒಟ್ಟಾಗಿ ಹಾಡಲು ಬರಬಹುದು. ಹೊಸದನ್ನು ಕಲಿಯಲು ಅಥವಾ ಹೊಸ ಹಾಡು ಕಲಿಸಲು ಉತ್ಸುಕರಾಗಬಹುದು. ವಿಷಯ ಕುರಿತು ಹಾಡೊಂದು ಗುಂಪಿನಲ್ಲಿ ಆಸಕ್ತಿ ಉಕ್ಕಿಸಬಹುದು. ಬಹುತೇಕ ಹೊಸ ಹಾಡುಗಳು ಅದು ಗುಂಪು ಮುನ್ನಡೆಯುವಂತೆ ವಿಶ್ರಮಿಸುವಂತೆ ಆಸ್ವಾದಿಸುವಂತೆ ಮಾಡಬಹುದು. ಮನೆಯಿಂದ ಅಡಿಗೆ ಮನೆಯ ಸಮಸ್ಯೆಗಳಿಂದ ದೂರವಿದ್ದು ಆನಂದಿಸುತ್ತಾರೆ.

## ಚಟುವಟಿಕೆ –ಡಿ

ದಿನಪತ್ರಿಕೆಯನ್ನು ಓದುವುದು ಸಾಮಾನ್ಯ ಸಂಗತಿ. ಆದರೆ ಬಹಳಷ್ಟು ಹೆಂಗಸರಿಗಲ್ಲ ವಿಶೇಷವಾಗಿ ಗ್ರಾಮೀಣ ಪ್ರದೇಶದವರಿಗಾಗಿ ಅದರಲ್ಲೂ ವಾರ್ತಾ ಪತ್ರಿಕೆಯನ್ನು ಒಬ್ಬರ ಆಸಕ್ತಿ ಅವಶ್ಯಕತೆಗಳಿಗೆ ಮಾಹಿತಿಯಾಗಿ ಪರಿವರ್ತಿಸುವುದಂತೂ ಇನ್ನು ಅಪರೂಪ. ಆದರೂ ಪಂಚಾಯತಿ ಕಾರ್ಯಕರ್ತೆಯರಿಗೆ ಇವೆಲ್ಲಾ ಅವಶ್ಯಕವಾದ ನೈಪುಣ್ಯತೆಯಾಗಿದೆ. ಖಂಡಿತವಾಗಿಯೂ ಈ ಚಟುವಟಿಕೆ ಮಹಿಳೆಯರ ದೃಷ್ಟಿ ಅವರಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ವ್ಯತ್ಯಾಸವನ್ನು ತೋರಿಸುತ್ತದೆ. ಆದ್ದರಿಂದ ಈ ಅಧಿವೇಶನದಲ್ಲಿ ಊಟವಾದ ಮೇಲೆ ಮಹಿಳೆಯರು ವಾರ್ತಾ ಪತ್ರಿಕೆಗಳ ರಾಶಿಯಿಂದ ತಮಗೆ ಬೇಕಾದುದನ್ನು ಆರಿಸಿಕೊಂಡು ಕಣ್ಣಾಡಿಸಬಹುದು. (ಅನಕ್ಷರಸ್ತರಿದ್ದರೆ ಓದಲು, ಬರೆಯಲು, ಬಲ್ಲವರ ನೆರವಿನಿಂದ) ನಂತರ ಒಂದೆರಡು ವಿಷಯಗಳನ್ನು ಚರ್ಚೆಗೆ ಎತ್ತಿಕೊಳ್ಳಬಹುದು. ಅರ್ಧ ಗಂಟೆಯ ನಂತರ ಪ್ರತಿ ಮಹಿಳೆ ಪತ್ರಿಕೆಯ ತಲೆಬರಹವನ್ನು ಓದಿ ತನ್ನ ಅನಿಸಿಕೆಗಳನ್ನು ತಿಳಿಸುತ್ತಾಳೆ. ಕೆಲವು ವಿವರಣೆಗಳು ಟೀಕಾತ್ಮಕವಾಗಿರುತ್ತವೆ. ಕೆಲವು ಪರಿಸ್ಥಿತಿ ಮುಂತಾದವುಗಳಿಗೆ ಸಂಬಂಧಿಸಿರುತ್ತದೆ. ಇದು ಮಹಿಳೆಯರು ಅಂತಹ ಮಾಹಿತಿಗಳನ್ನು ವಿಮರ್ಶಾತ್ಮಕವಾಗಿ ದೃಷ್ಟಿಸಲು ಸಹಾಯಕವಾಗುತ್ತದೆ. ಹೌದು, ಅವರು ತಮ್ಮ ದೃಷ್ಟಿಕೋನಗಳನ್ನು ಬೆಳಸಿಕೊಳ್ಳಲು ಧೈರ್ಯ ನೀಡುತ್ತದೆ. ಹಾಗೂ ನಿರ್ಭೀತರಾಗಿ ಮಾತನಾಡುತ್ತಾರೆ. ಅನೌಪಚಾರಿಕವಾಗಿ ಸಾವಕಾಶವಾಗಿ ಈ ಅಧಿವೇಶನವನ್ನು ನಡೆಸಿ.

## ಚಟುವಟಿಕೆ –ಇ

ಈಗ ಬೆಳಗಾಗಿದೆ. ತರಬೇತಿಯ ಎರಡನೆ ದಿನ. ಈ ಬೆಳಿಗ್ಗೆ ಏಳುವುದಷ್ಟೆ ಒಲೆ ಹಚ್ಚುವಂತಿಲ್ಲ. ಇದು ಹೊಸ ಅನುಭವ. ಬೇಗ ಸಿದ್ಧವಾಗುವುದು ಒಳ್ಳೆಯದು. (ಇದು ಬಹಳಷ್ಟು ಮಹಿಳೆಯರಿಗೆ ಸಮಸ್ಯೆಯೇನಲ್ಲ.) ಮತ್ತು ವಾಯು ಸಂಚಾರಕ್ಕೆ ಹೋಗಬಹುದು. ಕೆಲವು ಮಹಿಳೆಯರು ಮತ್ತಷ್ಟು ಸಮಯವನ್ನು ಸೈಕಲ್ ಕಲಿಯುವುದರಲ್ಲಿ ಕಳೆಯಬಹುದು. ನಮ್ಮ ಬಹಳಷ್ಟು ತರಬೇತಿ ಶಿಬಿರಗಳಲ್ಲಿ ಇದು ಜನಪ್ರಿಯ ಕಾರ್ಯಕ್ರಮ. ಆದರೆ ಪ್ರತಿಯೊಬ್ಬರನ್ನು ಕೆಲವು ಸುಲಭವಾದ ಗುಂಪು ವ್ಯಾಯಾಮಗಳಿಗೆ ಸೇರಿಸಿಕೊಳ್ಳಬೇಕು. ಇದು ಒಂದು ಚೆಂದದ ಹೊಸ ಅನುಭವ.

## ಚಟುವಟಿಕೆ –ಎಫ್

ಉಪಕಾರ ಮುಗಿದಿದೆ ಅಥವಾ ಬಹುಶಃ ತಡವಾಗಬಹುದು. ಒಟ್ಟಾಗಿ ವೃತ್ತಾಕಾರದಲ್ಲಿ ಕುಳಿತುಕೊಂಡು ಹಿಂದಿನ ದಿನದ ಅಧಿವೇಶನದ ಬಗ್ಗೆ ಚಿಂತಿಸಿ ಸಾವಧಾನವಾಗಿ ಯಾರೋ ಒಬ್ಬರು ನಿನ್ನೆಯ ಅಧಿವೇಶನದಲ್ಲಿ ಕಲಿತುಕೊಂಡುದುದನ್ನು ಮಂಡಿಸುತ್ತಾರೆ. ಏನನ್ನು ಕಲಿತುಕೊಂಡರು ಎಂಬುದರ ಬಗ್ಗೆ ಒಂದು ಸುತ್ತಿನ ಅಭಿಪ್ರಾಯಗಳನ್ನು ಪಡೆಯಬಹುದು. ಅವರ ಅನಿಸಿಕೆಗಳೇನು ಮತ್ತು ಯಾವುದಾದರು ಸಮಸ್ಯೆಗಳಿವೇಯೆ. ಬಹಳ ಸಮಯ ಬೇಕಿಲ್ಲ. ತಿಳಿಯಿರಿ. ಪ್ರತಿಯೊಬ್ಬರು ಒಂದೆರಡು ನಿಮಿಷಗಳಲ್ಲಿ ತಿಳಿಸಬಹುದು.

ಪ್ರತಿಯೊಬ್ಬರಿಗೂ ಮಾತನಾಡುವ ಮತ್ತು ಅಭಿಪ್ರಾಯ ಸೂಚಿಸುವ ಅವಕಾಶ ಕೊಡಿ. ದಿನವನ್ನು ಅವಸರ ರಹಿತವಾಗಿ ಪ್ರಾರಂಭಿಸಿ.

# ಅಧಿವೇಶನ – 4

**ವಿಷಯ :** **ಮೂಲ ಪಂಚಾಯತಿ ಕಾನುನುಗಳ ಬಗ್ಗೆ ತಿಳಿದುಕೊಳ್ಳುವುದು.**

**ಉದ್ದೇಶಗಳು:** **ಮಹಿಳೆಯರು ಈ ಕೆಳಗಿನ ವಿಷಯಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡು ಗ್ರಹಿಸುವುದು.**

ಎ. ಮಹಿಳೆಯರಿಗಾಗಿ 73ನೇ ತಿದ್ದುಪಡಿ ಮತ್ತದರ ಮಹತ್ವ

ಬಿ. ಪಂಚಾಯತಿಯ ಮೂರು ಹಂತದ ರಚನೆ

ಸಿ. ಪ್ರತಿಹಂತಕ್ಕೂ ಹೇಗೆ ಸದಸ್ಯರನ್ನು ಮತ್ತು ಅಧಿಕಾರ ವರ್ಗದವರನ್ನು ಚುನಾಯಿಸಲಾಗುವುದು.

ಡಿ. ಚುನಾವಣೆಗೆ ಅರ್ಹರ್‍ಯಾರು? ಯಾರು ಅಲ್ಲ? ಅನರ್ಹತೆ ಇರುವ ವಿಧಿಗಳು.

ಇ. ಮಿಸಲಾತಿಯ ಸ್ವರೂಪಗಳು, ಪರ್ಯಾಯ ಸರದಿ ಪಟ್ಟಿಯನ್ನು ತಯಾರಿಸುವುದು.

ಎಫ್. ಚುನಾವಣೆಗಳನ್ನು ಹೇಗೆ ನಡೆಸುವುದು?

ಜಿ. ಅಧಿಕಾರ ವರ್ಗದವರ ಅಧಿಕಾರವೇನು ಮತ್ತು ಅವರ ಕರ್ತವ್ಯಗಳ ಮೂಲ ನಿಯಮಗಳೇನು (ಸಭೆ ಕರೆಯುವುದು, ನಡವಳಿಗಳನ್ನು ಬರೆಯುವುದು)

ಎಚ್. ಸರ್ಕಾರಿ ಅಧಿಕಾರಿಗಳು :ನೌಕರರು ಮತ್ತು ಪಂಚಾಯತಿಗೆ ಅವರ ಸಂಬಂಧಗಳು (ಈಗ ಇರುವಂತೆ ಮತ್ತೆ ಬಯಸಿದಂತೆ)

ಐ. ರಾಜಕೀಯ ಪಕ್ಷಗಳಿಗಿರುವ ಸಂಬಂಧ (ಈಗ ಇರುವಂತೆ ಮತ್ತೆ ಬಯಸಿದಂತೆ)

ಜೆ. ಪಂಚಾಯತಿಯ ಕಾರ್ಯಗಳು - ಸರ್ಕಾರದ ನಿಯಮಗಳಂತೆ ಷೆಡ್ಯೂಲ್ 1,2 ಮತ್ತು 3 ಇಂದು ಮೂರು ಹಂತಗಳಲ್ಲಿ ವಾಸ್ತವವಾಗಿ ನಡೆಯುವಂತೆ.

ಕೆ. ಪಂಚಾಯತಿಯ ಹಣಕಾಸಿನ ಅಧಿಕಾರಿಗಳು, ನಿಧಿಯ ಮೂಲ (ಈಗ ಇರುವಂತೆ, ಮತ್ತೆ ಬಯಸಿದಂತೆ)

**ಚಟುವಟಿಕೆಗಳು : ವಿಧಾನ**

ಎ. ಸಂಕ್ಷಿಪ್ತ ಪರಿಚಯ ಮತ್ತು ವಸ್ತು ಸಾಮಗ್ರಿಗಳ ವಿತರಣೆ (ಹತ್ತು ನಿಮಿಷಗಳು)

ಬಿ. ಸಣ್ಣ ಗುಂಪುಗಳಲ್ಲಿ ಪ್ರತಿ ಪುಟಗಳನ್ನು ಓದುವುದು ಮತ್ತು ಗುಂಪಿಗೆ ಸಮಾಧಾನಕರವಾದ ಉತ್ತರ ದೊರೆಯದ ಪ್ರಶ್ನೆಗಳನ್ನು ಗುರುತು ಹಾಕಿಕೊಳ್ಳುವುದು. (2 ಗಂಟೆಗಳು)

ಸಿ. ಜಂಟಿ ಅಧಿವೇಶನ (ಪ್ರತಿ ವರ್ಗವನ್ನು ಓದುವುದು ಮತ್ತು ಪ್ರಶ್ನೆಗಳಿಗೆ ಸ್ಪಷ್ಟೀಕರಣ ನೀಡುವುದು) (1 ಗಂಟೆ)

**ಚಟುವಟಿಕೆ - ಜಿ**

ಎ. ಯಾವುದಾದರು ಹಾಡಿನ ನಂತರ 10 ನಿಮಿಷ ಅವಧಿಯ ಆಟ. ಅಲ್ಲಿ ಹಲವಾರು ಸಾಧ್ಯತೆಗಳಿವೆ. ನಮ್ಮ ಕಳೆದ ಎರಡು ಶಿಬಿರಗಳಲ್ಲಿ ಸಂಪನ್ಮೂಲ ವ್ಯಕ್ತಿಗಳು ಎದ್ದು ನಿಂತು ತಮ್ಮ ಪೆನ್ನನ್ನು ತೋರಿಸಿದರು. ಆಕೆ ಪ್ರತಿಯೊಬ್ಬ ತರಬೇತಿ ಪಡೆಯುವವರನ್ನು ಕರೆದು ಪೆನ್ನು ಉಪಯೋಗಿಸದೆ ಬೇರೆ ಏನನ್ನಾದರೂ ಉಪಯೋಗಿಸಿ ಮೂಕಾಭಿನಯ ಮಾಡಲು ತಿಳಿಸುತ್ತಾಳೆ. ಉಳಿದವರು ಆಕೆ ಏನನ್ನು ಮಾಡಿದಳು ಎಂಬುದನ್ನು ಹೇಳಬೇಕು. ಇದರಿಂದ ಬಹಳಷ್ಟು ವಿಚಾರಗಳು ಸೃಷ್ಟಿಯಾಗುತ್ತದೆ. ಪ್ರತಿಯೊಬ್ಬರಿಗೂ ಅವಕಾಶ ಇರುತ್ತದೆ.

# ಅಧಿವೇಶನ - 5

ವಿಷಯ : ಬಡತನದ ಮೂಲ, ನಿರುದ್ಯೋಗ ಮತ್ತು ಅಸಮಾನತೆ:

**ಉದ್ದೇಶಗಳು:**

ಅ. ಬಡತನ ಮತ್ತು ನಿರುದ್ಯೋಗ ಎಲ್ಲರಿಗೂ ತಿಳಿದಿರುವ ಮುಖ್ಯ ಸಮಸ್ಯೆಗಳು ಅಸಮಾನತೆ ಸಹಾ ಇದಕ್ಕೆ ಮುಖ್ಯ ಕಾರಣವೆಂಬುದನ್ನು ಕೆಲವು ಹಂತದಲ್ಲಿ ಮಾತ್ರ ತಿಳಿಯಲಾಗಿದೆ. ಆದರೆ ಅದು ಹೇಗೆ ಪ್ರಾರಂಭವಾಯಿತು ಎಂಬ ಬಗ್ಗೆ ಮಾಹಿತಿ ಅಗತ್ಯ. ಸಹಜವೆಂದು ತಿಳಿದಿರುವ ತಪ್ಪು ಕಲ್ಪನೆಯನ್ನು ಹೋಗಲಾಡಿಸಲು.

ಎ. ಬ್ರಿಟಿಷರು ಭಾರತದಲ್ಲಿದ್ದಾಗಿನ ಅಸಮಾನತೆ ಮತ್ತು ಪರಿಸ್ಥಿತಿಯನ್ನು ಸಂಕ್ಷಿಪ್ತವಾಗಿ ತಿಳಿಯುವುದು.

ಬಿ. ವಸಾಹತು ಆಡಳಿತದ ಪರಿಣಾಮಗಳು,

I. ರೈತರ ಅವನತಿ ಮತ್ತು ತಯಾರಿಕೆ - ಪರಿಣಾಮವಾಗಿ ನಿರುದ್ಯೋಗ : ಬಡತನ

II. ಜಮೀನ್ದಾರಿ ಪದ್ಧತಿಯ ಉಗಮ ಮತ್ತು ಅದರ ಉದ್ದೇಶ (ಪಾಳೇಗಾರರ ಪಾತ್ರ)

III. ಪ್ರಾರಂಭದಲ್ಲಿ ವ್ಯಾಪಾರಿಗಳಾಗಿ ಬ್ರಿಟೀಷರ ಪಾತ್ರ, ಆದರೆ ನಂತರ ಭಾರತ ದೇಶವನ್ನು ಸರಕು ಸರಬರಾಜು ಮಾಡುವ ದೇಶವನ್ನಾಗಿ ಬದಲಾಯಿಸಿದ್ದು ಮತ್ತು ಬ್ರಿಟಿಷ್ ಸರಕುಗಳಿಗೆ ಮಾರುಕಟ್ಟೆಯನ್ನು ಒದಗಿಸಿ ಕೈಗಾರಿಕಾ ಬೆಳವಣಿಗೆ ಇಲ್ಲದೆ, ಪರಿಣಾಮವಾಗಿ ಭಾರತದಲ್ಲಿನ ಬಡತನ ಮತ್ತು ನಿರುದ್ಯೋಗ.

IV. ಬ್ರಿಟಿಷ್ ಸಾಮ್ರಾಜ್ಯ, ತತ್ವ, ಬಂಡವಾಳ ರಫ್ತು ಮಾಡುವಲ್ಲಿ 20ನೇ ಶತಮಾನದ ಪಾತ್ರ.

ಅ. ಮಹಿಳೆಯರು ಬಡತನ, ಶ್ರೀಮಂತನ, ಭೂಮಿಯ ಒಡೆತನ ಮತ್ತು ರೈತ ಮುಂತಾದವು ಪ್ರಕೃತಿ ಸಹಜವಾದ ವ್ಯವಸ್ಥೆಗಳಲ್ಲ, ಆದರೆ ಉದ್ದೇಶಪೂರ್ವಕವಾಗಿ ಮತ್ತು ಅನ್ಯಾಯವಾಗಿ ಸೃಷ್ಟಿಸಿದವುಗಳಾಗಿವೆ. ಇದನ್ನು ತಿಳಿಯಲು ಅವಕಾಶ ಮಾಡಿಕೊಡಬೇಕು. ಪೂರ್ವದಲ್ಲಿ ಸರ್ವರ ಒಡೆತನಕ್ಕೆ ಸೇರಿದ ಆಸ್ತಿ ಇದ್ದು, ಅದನ್ನು ನಾಶ ಮಾಡಲಾಯಿತು. ಸಮಾನತೆಗೆ ಕೈಗೊಂಡ ಕಾರ್ಯ, ಈ ಅನ್ಯಾಯವನ್ನು ತಿರುವು ಮುರುವು ಮಾಡಿತು. ಇದು ನ್ಯಾಯಕ್ಕಾಗಿ ಇರುವ ಒಂದು ಹೋರಾಟ.

**ಚಟುವಟಿಕೆಗಳು : ವಿಧಾನ:**

ಎ. ಮಂಡನೆಗಾಗಿ : 45 ನಿಮಿಷಗಳಿಗಿಂತ ಹೆಚ್ಚು ಆಧಾರಿತ ಅಥವಾ ವಿತರಿಸಿದ ಟಿಪ್ಪಣಿ : ಸಾಮಗ್ರಿ

ಬಿ. ಟಿಪ್ಪಣಿಯನ್ನು ಓದುವುದು ಮತ್ತು ಪ್ರಶ್ನೆಗಳನ್ನು ಕೇಳುವುದು (30 ನಿಮಿಷಗಳು) ಅವಧಿ ಒಂದರಿಂದ ಒಂದುವರೆ ಗಂಟೆಗಳು

# ಅಧಿವೇಶನ - 6

## ಚಟುವಟಿಕೆ - ಎಚ್

**ಒಂದು ಮಾದರಿ ಪಂಚಾಯತಿ**

ಎ. ಮಹಿಳೆಯರಿಗೆ ಅಧಿಕಾರ ಅವಕಾಶ, ಕಲ್ಪನಾ, ಶಕ್ತಿ ಇದ್ದಲ್ಲಿ ಅನೇಕ ಸಾಧ್ಯವಾದವುಗಳನ್ನು ಮಾಡಬಹುದು. ಎಂಬುದರ ಬಗ್ಗೆ ಯೋಚಿಸಲು ಪ್ರೋತ್ಸಾಹಿಸಬೇಕು.

ಬಿ. ಏಕಾಗ್ರತೆಯಿಂದ ಕೇಳುವುದು, ಪ್ರಶ್ನಿಸುವ ನೈಪುಣ್ಯತೆ, ಜೊತೆಗೆ ಅವರ ಅನಿಸಿಕೆಗಳನ್ನು ಮಂಡಿಸುವುದು ಮತ್ತು ಸಾರ್ವಜನಿಕವಾಗಿ ತಿಳಿಸುವುದು.

**ಚಟುವಟಿಕೆ ವಿಧಾನಗಳು :**

I. ಭಾಗವಹಿಸುವವರು ಕನಸಿನ ಅಧಿವೇಶನದಲ್ಲಿ ನಿರತರಾಗುತ್ತಾರೆ. ತಮ್ಮದೇ ಆದ ಪಂಚಾಯತಿ ಇದ್ದರೆ ಅವರು ಏನನ್ನು ಮಾಡಲು ಇಷ್ಟ ಪಡುತ್ತಾರೆ ಎಂಬ ಕನಸಿನ ಬಗ್ಗ್ ಹಂಚಿಕೊಳ್ಳುವುದು.

II. ಒಂದು ಗುಂಪಿನಿಂದ ಒಬ್ಬರು - ಮೊದಲೇ ಆರಿಸಿದಂತೆ ಅಧಿವೇಶನದಲ್ಲಿ ಮಾಡಿದ ಸಲಹೆಗಳನ್ನು ಪಟ್ಟಿ ಮಾಡುವುದು.

III. ಗುಂಪಿನ ಸದಸ್ಯರು ಬಿಟ್ಟು ಹೋದ ಸಲಹೆಗಳನ್ನು ವಿಶೇಷವಾಗಿ ಅವರು ಮುಖ್ಯವೆಂದು ತಿಳಿದ ಸಲಹೆಗಳನ್ನು ತಿಳಿಸುವರು.

IV. ಬಹಳಷ್ಟು ಸದಸ್ಯರು ಏನು ಹೇಳಿದರು - ಕೆಲವರು ಹೇಳಿದ್ದು ಒಂದು ಅಥವಾ ಎರಡು ಸಣ್ಣ ಪುಟ್ಟ ಅಲ್ಪ ಸಂಖ್ಯೆಯ ದೃಷ್ಟಿಯಿಂದ ಹೇಗೆ ವಿಭಜನೆ ಮಾಡುವುದು.

ಬಿ. 3 ಅಥವಾ 4 ಮಹಿಳೆಯರನ್ನು ಚುನಾವಣೆಗೆ ನಿಲ್ಲಲು ಮುಂದೆ ಬರಲು ತಿಳಿಸುವುದು. ಅವರು ತಮ್ಮ ಚುನಾವಣಾ ಭಾಷಣವನ್ನು ನೀಡುವರು. ಇತರ ಸದಸ್ಯರು ಪ್ರಶ್ನೆಗಳನ್ನು ಕೇಳಬಹುದು. ಚುನಾವಣೆಗಳನ್ನು ನಡೆಸುವುದು.

**ಚಟುವಟಿಕೆ : ಐ**

ಇಂದು ಬಿಡುವಿಲ್ಲದ ದಿನವಾಗಿದೆ. ಬಹಳಷ್ಟು ಪರಿಕರಗಳು ಬಹಳಷ್ಟು ನಮಗೆ ತಿಳಿದಿದೆ. ಇನ್ನೂ ಬಹಳಷ್ಟು ಬರಲಿವೆ. ಹೇಗೆ ವಿಶ್ರಮಿಸುವುದು? ಮನಸ್ಸನ್ನು ಪ್ರಫುಲ್ಲಗೊಳಿಸುವುದು ಹೇಗೆ?

ಅವರು ಒಂದೆರಡು ಗಂಟೆ ಆರಾಮವಾಗಿರಲಿ ಬಹುಶಃ ಆದರೆ ಕೆಲವು ವೇಳೆ ಹಲವರು ಇಷ್ಟಾದರೂ ವಿಶ್ರಮಿಸುವುದಿಲ್ಲ. ಸ್ಥಳ ಬದಲಾಯಿಸುವುದು ಒಳ್ಳೆಯದು. ವಿಶ್ರಾಂತಿ ಪಡೆಯುತ್ತ ವಾರ್ತಾ ಪತ್ರಿಕೆ ಓದುವ ಅಧಿವೇಶನವನ್ನಾಗಿ ಮಾಡಬಹುದು. ಅಥವಾ ಕೆಲವು ಹಾಡುಗಳನ್ನು

ಕಲಿಯಬಹುದು. ಅಂತಹ ಚಟುವಟಿಕೆಗಳು ಹೆಚ್ಚಿನ ವಿಶ್ರಾಂತಿ ನೀಡಬಲ್ಲವು ಅಥವಾ ಆತಂಕ ಉಂಟು ಮಾಡಬಲ್ಲವು ಮತ್ತು ಜನರನ್ನು ಹೆಚ್ಚಾಗಿ ಆಯಾಸಗೊಳಿಸಬಲ್ಲವು. ಇದನ್ನು ಸಂಪನ್ಮೂಲ ವ್ಯಕ್ತಿಗಳು ಹೇಗೆ ನಿಭಾಯಿಸುತ್ತಾರೆ ಎಂಬುದನ್ನು ಅವಲಂಬಿಸುತ್ತದೆ. "ಈಕೆ ವಿಶ್ರಮಿಸಿದಳೇ" "ಈಕೆ ಆನಂದಿಸುತ್ತಿರುವಳೇ?" ಒಬ್ಬಿಬ್ಬರು ತರಬೇತಿ ಪಡೆಯುವವರು ಈ ನೈಪುಣ್ಯತೆ ಅರಿತವರು, ಸಂಪನ್ಮೂಲ ವ್ಯಕ್ತಿಗಳಾಗಲೂ ಬಹುದು ಮತ್ತು ಈ ಚಟುವಟಿಕೆಯನ್ನು ಕೈಗೊಳ್ಳಬಹುದು.

**ಚಟುವಟಿಕೆ : ಜೆ**

ಇದು ಬೆಳಗಿನ ಕಾರ್ಯಕ್ರಮದ ಬಗ್ಗೆ ಮನನ ಮಾಡಲು ಮತ್ತು ನವ ಚೈತನ್ಯ ಪಡೆಯಲು ತರಬೇತಿ ಪಡೆಯುವವರನ್ನು 3 ಅಥರಾ 4 ಗುಂಪುಗಳಾಗಿ ವಿಭಾಗಿಸಿ ಪ್ರತಿ ಗುಂಪು ಅಧಿವೇಶನ 4 ಅನ್ನು ಕುರಿತಂತೆ ಪ್ರಶ್ನೆಗಳ ಪಟ್ಟಿ ಒಂದನ್ನು ತಯಾರಿಸಲಿ. ಅಂದರೆ ಪಂಚಾಯಿತಿಯ ಮೂಲ ನಿಯಮಗಳನ್ನು ಅರ್ಥ ಮಾಡಿಕೊಳ್ಳುವುದು. ನಂತರ 3 ಮತ್ತು 4ನೇ ಗುಂಪುಗಳು ನಿಜವಾದ ವಿನೋದ ಗೇಲಿಗಳಲ್ಲಿ ತೊಡಗಲಿ. ಯಾರು ಗೆಲುವಿನ ಬಹುಮಾನ ಪಡೆದರು ಯಾರು ಸೋತರು ಮುಖ್ಯವಲ್ಲ ಪ್ರತಿಯೊಬ್ಬರು ಕಲಿಯುತ್ತಾರೆ.

